KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೬ | ಬೆಂಗಳೂರು, ಗುರುವಾರ, ಜೂನ್ ೨, ೨೦೧೧ (ಜ್ಯೇಷ್ಠ ೧೨ ಶಕ ವರ್ಷ ೧೯೩೩) | ಸಂಚಿಕೆ ೨೨ |
|---|---|---|

## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕರ್ನಾಟಕ ಸರಕಾರ**

**ಅಬಕಾರಿ ನಿರೀಕ್ಷಕರು, ಬಸವನ ಬಾಗೇವಾಡಿ ವಲಯ**

**ಅಧಿಸೂಚನೆ**

**ವಿಷಯ :** ಭಾರತ ಸರಕಾರ ಮಾಹಿತಿ ಹಕ್ಕು ಅಧಿನಿಯಮ 2005 ರ ಕಲಂ 4(1) (ಬಿ) ಅನುಸಾರ ಡೆಪ್ಯೂಟಿ ಕಮೀಶನರ ಆಫ್ ಎಕ್ಸೈಜ್, ಕಛೇರಿ ವಿಜಾಪೂರಕ್ಕೆ ಸಂಬಂಧಿಸಿದಂತೆ 2010–11 ನೇ ಸಾಲಿನ ಅಂತ್ಯಕ್ಕೆ ಇದ್ದಂತೆ ಕಛೇರಿಯ ಮಾಹಿತಿಯನ್ನು ಕಾಲೋಚಿತಗೊಳಿಸಿ ಪ್ರಕಟಿಸುವ ಬಗ್ಗೆ.

ಭಾರತ ಸರ್ಕಾರವು ಜಾರಿಗೆ ತಂದಿರುವ 2005 ರ ಮಾಹಿತಿ ಹಕ್ಕು ಕಾಯ್ದೆಯಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಮಾಹಿತಿ ಹಕ್ಕು ಅಧಿನಿಯಮ 2005 (Central Act 22 of 2005) Section 5(1) (2) & 19(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅಬಕಾರಿ ನಿರೀಕ್ಷಕರು ಬಸವನ ಬಾಗೇವಾಡಿ ಕಛೇರಿ ವ್ಯಾಪ್ತಿಯ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಅಂತಹ ಮಾಹಿತಿಯನ್ನು ಮೇಲಿನ ಕಾಯ್ದೆಯನ್ವಯ ಒದಗಿಸಲು ಮಾಹಿತಿ ಕೋರುವ ಅರ್ಜಿಗಳು ಅಥವಾ ಮೇಲ್ಮನವಿಗಳನ್ನು ಸವಿಕರಿಸುವ ಅನುಕ್ರಮವಾಗಿ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನಾಗಿ ಇಲಾಖೆಯ ಮುಖ್ಯಸ್ಥರ ಅಬಕಾರಿ ಉಪ ಆಯುಕ್ತರು ವಿಜಾಪೂರ ಕೆಳಕಂಡಂತೆ ನೇಮಿಸಿರುತ್ತಾರೆ.

| ಕ್ರ. ಸಂ. | ಕಛೇರಿಯ ಹೆಸರು | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005 ರ ಸೆಕ್ಷನ್ 5(1) (2) ರ ಪ್ರಕಾರ | | ಮಾಹಿತಿ ಪಡೆಯುವ ಹಕ್ಕು ಕಾಯ್ದೆ 2005 ರ ಸೆಕ್ಷನ್ 19(1) ರ ಪ್ರಕಾರ ಮೇಲ್ಮನವಿ ಪ್ರಾಧಿಕಾರಿ. |
|---|---|---|---|---|
| | | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | |
| 1. | ಅಬಕಾರಿ ನಿರೀಕ್ಷಕರ ಕಾರ್ಯಾಲಯ ಬಸವನ ಬಾಗೇವಾಡಿ ದೂರವಾಣಿ ಸಂಖ್ಯೆ : 08358–244474 | ಅಬಕಾರಿ ನಿರೀಕ್ಷಕರ ಕಾರ್ಯಾಲಯ ಬಸವನ ಬಾಗೇವಾಡಿ ಮೊ:9448581247 | ಅಬಕಾರಿ ಉಪ ನಿರೀಕ್ಷಕರ ಕಾರ್ಯಾಲಯ ಬಸವನ ಬಾಗೇವಾಡಿ ಮೊ:9611972299 | ಅಬಕಾರಿ ಉಪ ಅಧೀಕ್ಷಕರು ವಿಜಾಪೂರ ಉಪ ವಿಭಾಗ ವಿಜಾಪೂರ ಮೊ:9448778593, 9449597168 |

ಕೇಂದ್ರ ಸರಕಾರವು ಜಾರಿಗೆ ತಂದಿರುವ 2005 ರ ಮಾಹಿತಿ ಹಕ್ಕು ಕಾಯ್ದೆ ಇದಾಗಿದ್ದು, ಸದರ ಕಾಯ್ದೆಯ ಕಲಂ 4(1) ರಡಿ ಒಟ್ಟು 16 ವಿವಿಧ ಅಂಶಗಳನ್ನೊಳಗೊಂಡ ಒಂದು ಕೈಪಿಡಿ ತಯಾರಿಸಬೇಕಾಗಿದ್ದು, ಈ ಕಛೇರಿಯ ಕಾರ್ಯಚಟುವಟಿಕೆಗಳ ಮಾಹಿತಿ ಈ ಕೆಳಕಂಡಂತಿದೆ.

ಅಬಕಾರಿ ನಿರೀಕ್ಷಕರು ಬಸವನಬಾಗೇವಾಡಿ ವಿಜಾಪೂರ ಜಿಲ್ಲೆ, ಮಾಹಿತಿ ಪಡೆಯಲು ಮಾಹಿತಿ ಹಕ್ಕು 2005 ರ ಅಧಿನಿಯಮದ ಅಧ್ಯಾಯ –2 ರ ಪರಿಚ್ಛೇಧ (ಸೆಕ್ಸೆನ್) 4(1) (ಎ) & (ಬಿ) (1) ರನ್ವಯ

**1. ಇಲಾಖೆಯ ಪರಿಚಯ ಹಾಗೂ ಕಾರ್ಯಚಟುವಟಿಕೆಗಳನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.**

ರಾಜ್ಯ ಅಬಕಾರಿ ಇಲಾಖೆಯು ಮೂಲತಃ ಸರಕಾರಕ್ಕೆ ರಾಜಸ್ವ ತರುವ ಪ್ರಮುಖ ಇಲಾಖೆಗಳಲ್ಲಿ ಒಂದಾಗಿದ್ದು, ರಾಜಸ್ವವನ್ನು ಸಂಗ್ರಹಿಸುವ ನಿಟ್ಟಿನಲ್ಲಿ ಇಲಾಖೆಯು ವಿವಿಧ ಮಾದಕ ವಸ್ತುಗಳನ್ನು ಅಬಕಾರಿ ನಿಯಮಗಳಡಿ ನಿರೂಪಿಸಿರುವಂತೆ ಉತ್ಪಾದಿಸಿ ಅಧೀಕೃತವಾಗಿ ಮಾರಾಟ ಮಾಡಲು ವಿವಿಧ ನಮೂನೆಯ ಸನ್ನದುಗಳನ್ನು ನೀಡಿ ಅವುಗಳ ಕಾರ್ಯಚಟುವಟಿಕೆಗಳ ಮೇಲೆ ನಿಗಾ ಇಟ್ಟು ರಾಜಸ್ವ ಪೋಲಾಗದಂತೆ ನೋಡಿಕೊಳ್ಳಲು ಇಲಾಖೆಯು ಸಾಕಷ್ಟು ಅಬಕಾರಿ ನೌಕರರನ್ನು ಹೊಂದಿದ್ದು, ಅಬಕಾರಿ ನಿಯಮಗಳಲ್ಲಿ ನಿರೂಪಿಸಿರುವಂತೆ ವಿವಿಧ ಅಧಿಕಾರಿ ಸಿಬ್ಬಂದಿಗಳಿಗೆ ಅವರುಗಳದೇ ಆದ ಕರ್ತವ್ಯವನ್ನು ನೀಡಲಾಗಿರುತ್ತದೆ. ಅಲ್ಲದೇ ಸರ್ಕಾರವು ಕಾಲಕಾಲಕ್ಕೆ ಸದರ ಕರ್ತವ್ಯಗಳಲ್ಲಿ ಬದಲಾವಣೆಗಳನ್ನು ತಂದು ಹೊರಡಿಸುವ ಅಧಿಸೂಚನೆಗಳನ್ನು ಪರಿಣಾಮಕಾರಿಯಾಗಿ ಜಾರಿಯಲ್ಲಿ ತರುವುದು ಇಲಾಖೆಯ ಆದ್ಯ ಕರ್ತವ್ಯವಗಳಲ್ಲೊಂದಾಗಿದೆ.

**2. ಅಬಕಾರಿ ನಿರೀಕ್ಷಕರು ಮತ್ತು ಉಪನಿರೀಕ್ಷಕರು ಲಿಪಿಕ ಸಿಬ್ಬಂದಿ ಅಬಕಾರಿ ಹಿರಿಯ ರಕ್ಷಕ ಮತ್ತು ರಕ್ಷಕರ ಕರ್ತವ್ಯಗಳು.**

ಸರ್ಕಾರದ ಅಧಿಸೂಚನೆ ನಂ. :ಎಫ್.ಡಿ:42 ಇಪಿಎಸ್:07(1), ಬೆಂಗಳೂರು ದಿನಾಂಕ:24–03–2008 ರನ್ವಯ ಕಾರ್ಯಕಾರಿ ಅಧಿಕಾರಿಗಳು ಹಾಗೂ ನೌಕರುಗಳಿಗೆ ಅಧಿಕಾರ ಹಾಗೂ ಕರ್ತವ್ಯಗಳನ್ನು ಕೆಳಗಿನಂತೆ ಅದನ್ನು ಅನುಷ್ಠಾನಗೊಳಿಸುವುದಲ್ಲದೇ ಈ ಕಛೇರಿಯನ್ನೊಳಗೊಂಡಂತೆ ಕರ್ತವ್ಯಗಳನ್ನು ಕೆಳಗಿನಂತೆ ವಿಂಗಡಿಸಲಾಗಿದೆ.

| ಕ್ರ.ಸ.೦ | ಅಧಿಕಾರಿ ನೌಕರರ ಪದನಾಮ | ಕರ್ತವ್ಯಗಳು |
|---|---|---|
| 01 | ಅಬಕಾರಿ ನಿರೀಕ್ಷಕರು | ತಾಲ್ಲೂಕಿನಲ್ಲಿ ಮುಖ್ಯಸ್ಥರಾಗಿದ್ದು, ವಲಯ ಕಛೇರಿ ಅಧೀನದಲ್ಲಿ ಬರುವ ಹಾಗೂ ಆಗು ಹೋಗುಗಳಿಗೆ ಇವರೇ ಜವಾಬ್ದಾರರಾಗಿರುತ್ತಾರೆ. |
| 02 | ಅಬಕಾರಿ ಉಪನಿರೀಕ್ಷಕರು | ಕಛೇರಿ ಆಡಳಿತ ನೇರ ಸಂಪರ್ಕವನ್ನು ಹೊಂದಿದ್ದು, ಅಬಕಾರಿ ನಿರೀಕ್ಷಕರ ನಿರ್ದೇಶನದಂತೆ ಕಾರ್ಯವನ್ನು ನಿರ್ವಹಿಸುವುದು. |
| 03 | ಅಬಕಾರಿ ಹಿರಿಯ ರಕ್ಷಕ ಹಾಗೂ ಅಬಕಾರಿ ರಕ್ಷಕ | ತಾಲೂಕಿಗೆ ಸಂಬಂಧಿಸಿದಂತೆ ಅಬಕಾರಿ ಅಕ್ರಮ ಚಟುವಟಿಕೆಗಳನ್ನು ತಡೆಗಟ್ಟಲು ಜಾರಿ ಮತ್ತು ತನಿಖಾ ಕಾರ್ಯಗಳನ್ನು ಪರಿಣಾಮಕಾರಿಯಾಗಿ ನಿರ್ವಹಿಸುವುದು. ಕೈಪಿಡಿಗೆ ಸಂಬಂಧಿಸಿದಂತೆ ವಲಯದ ಪ್ರತಿ ರಕ್ಷಕರಿಗೆ ಅಕ್ರಮಗಳನ್ನು ತಡೆಗಟ್ಟಲು ಭೀಟ ಮಾರ್ಗವಾಗಿ ನಿಯೋಜಿಸಿದ್ದು, ನಿಯೋಜಿಸಿದ ಭೀಟಗಳಲ್ಲಿ ಅಬಕಾರಿ ಪ್ರಕರಣಗಳು ಪತ್ತೆಯಾದಲ್ಲಿ ಹಳೆಯ ಆರೋಪಿಗಳ ಮೇಲೆ ನಿಗಾ ವಹಿಸುವುದು. ಆಕ್ರಮದ ಮಧ್ಯದಲ್ಲಿ ಕಂಡು ಬಂದಲ್ಲಿ ವಲಯ ತನಿಖಾಧಿಕಾರಿಗಳ ಗಮನಕ್ಕೆ ತರುವುದು. |
| 04 | ಅಬಕಾರಿ ದ್ವಿ.ದ.ಸ | ಆವಕ, ಜಾವಕ ಸಿಬ್ಬಂದಿ ಸಂಕಲನ ಆಡಳಿತದ ಎಲ್ಲಾ ವಲಯಕ್ಕೆ ಸಂಬಂಧಿಸಿದಂತೆ ಸಂಪೂರ್ಣ ಸಂಕಲಗಳನ್ನು ನೋಡಿಕೊಳ್ಳುವುದು. |
| 05 | ವಾಹನ ಚಾಲಕ | ಅಬಕಾರಿ ನಿರೀಕ್ಷಕರು ಹಾಗೂ ಉಪ ನಿರೀಕ್ಷಕರು ಇವರಿಗೆ ಅಬಕಾರಿ ದಾಳಿ ಮತ್ತು ಗಸ್ತು ಸಮಯದಲ್ಲಿ ವಾಹನ ಚಾಲನೆ ನಡೆಸುವುದು ಮತ್ತು ಜಾರಿಮತ್ತು ತನಿಖಾ ಕಾರ್ಯಗಳಲ್ಲಿ ನೆರವಾಗುವುದು. |

**3. ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯು ಮಾರ್ಗಗಳು ಸೇರಿದಂತೆ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ಅನುಸರಿಸಬೇಕಾದ ಕಾರ್ಯವಿಧಾನಗಳು.**

ತಾಲೂಕಿನಲ್ಲಿ ಬರುವ ಅಧೀನ ಕಛೇರಿಯು ಮೇಲ್ವಿಚಾರಣೆ ಮತ್ತು ಹೊಣೆಗಾರಿಕೆಯು ಅಬಕಾರಿ ನಿರೀಕ್ಷಕರು ಬಸವನ ಬಾಗೇವಾಡಿ ಇವರ ಮೇಲಿದ್ದು, ಯಾವುದೇ ವಿಷಯಗಳಲ್ಲಿ ತಾಲೂಕಿನಲ್ಲಿ ತೀರ್ಮಾನ ತೆಗೆದುಕೊಳ್ಳುವ ಪ್ರಕ್ರಿಯೆಯಲ್ಲಿ ನಿಯಮಗಳಡಿ ನಿರೂಪಿಸುವಂತೆ ಕಾರ್ಯವಿಧಾನವನ್ನು ಅನುಸರಿಸಲಾಗುತ್ತಿದೆ.

**4. ಅದರ ಕರ್ತವ್ಯಗಳ ನಿರ್ವಹಣೆಗೆ ಅದು ರೂಪಿಸಿರುವ ಸೂತ್ರಗಳು:**

ಅಬಕಾರಿ ಇಲಾಖೆಯು ಕರ್ತವ್ಯಗಳ ನಿರ್ವಹಣೆಗಾಗಿ ಅಬಕಾರಿ ಕಾಯ್ದೆ 1965 ಹಾಗೂ ವಿವಿಧ ನಿಯಮಗಳು ಹಾಗೂ ಕಾಲಕಾಲಕ್ಕೆ ಹೊರಡಿಸಿರುವ ಅಧಿಸೂಚನೆಗಳು ಮತ್ತು ಸುತ್ತೋಲೆಗಳು ಸರಕಾರಿ ಆದೇಶಗಳನ್ವಯ ವಿವಿಧ ಸೂತ್ರಗಳನ್ನು ರೂಪಿಸಲಾಗಿರುತ್ತದೆ.

**5. ಅದರ ಕಾರ್ಯಗಳನ್ನು ನಿರ್ವಹಿಸುವುದಕ್ಕಾಗಿ ಅದು ಹೊಂದಿರುವ ಅಥವಾ ಅದರ ನಿಯಂತ್ರಣದಲ್ಲಿರುವ ಅಥವಾ ಅದರ ಉದ್ಯೋಗಿಗಳು ಬಳಸುವ ನಿಯಮಗಳು ವಿನಿಮಯಗಳೂ ಅನುಸೂಚಿಗಳು ಕೈಪಿಡಿಗಳು ಮತ್ತು ದಾಖಲೆಗಳೇನು.**

ಅಬಕಾರಿ ಇಲಾಖೆಯು ಕಾರ್ಯಗಳನ್ನು ನಿರ್ವಹಿಸುವದಕ್ಕಾಗಿ ಅದು ಹೊಂದಿರುವ ಹಾಗೂ ಅದರ ನಿಯಂತ್ರಣದಲ್ಲಿರುವ ಅದರ ಉದ್ಯೋಗಿಗಳು ಕರ್ನಾಟಕ ಅಬಕಾರಿ ಕಾಯ್ದೆ 1965 ಹಾಗೂ ವಿವಿಧ ನಿಯಮಗಳು ಹಾಗೂ ಕಾಲ ಕಾಲಕ್ಕೆ ಹೊರಡಿಸಿರುವ ಅಧಿಸೂಚನೆ ಮತ್ತು ಸುತ್ತೋಲೆಗಳು ಸರಕಾರಿ ಆದೇಶಗಳು ಇತ್ಯಾದಿ ದಾಖಲೆಗಳನ್ನು ಹೊಂದಿರುತ್ತದೆ.

**6. ಅದು ಹೊಂದಿರುವ ಅಥವಾ ಅದರ ನಿಯಂತ್ರಣದಲ್ಲಿರುವ ದಸ್ತಾವೇಜುಗಳ ಪ್ರವರ್ಗಗಳ ವಿವರ ಪಟ್ಟಿ ಏನು.**

1. ಸೇವಾ ಪುಸ್ತಕಗಳು (ಗ್ರೂಪ್ ಸಿ & ಡಿ ನೌಕರರಿಗೆ ಸಂಬಂಧಿಸಿದ್ದವು)
2. ಸಾಮಾನ್ಯ ಸ್ವೀಕೃತಿ ವಹಿ
3. ರವಾನಿ ವಹಿ
4. ಸ್ಟಾಂಪ್ ವಹಿ
5. ನಗದು ಪುಸ್ತಕ
6. ಹಾಜರಿ ಪುಸ್ತಕ
7. ಖರ್ಚುವೆಚ್ಚಗಳ ಪುಸ್ತಕ
8. ಡಿ.ಸಿ ಬಿಲ್ ಪುಸ್ತಕ
9. ಚೆಕ್ ಸ್ವೀಕೃತಿ ಪುಸ್ತಕ
10. ವೇತನ ಪಾವತಿ ಪುಸ್ತಕ
11. ಪೀಠೋಪಕರಣಗಳು ಹಾಗೂ ಇತರ ಸಾಮಗ್ರಿಗಳ ವಹಿ
12. ಕಛೇರಿಯ ಆದೇಶದ ಪುಸ್ತಕ
13. ಸಿಬ್ಬಂದಿಗಳ ರಜೆಯ ಲೆಕ್ಕಗಳು
14. ಗ್ರಂಥಾಲಯ ವಹಿ
15. ಕ್ರೈಂ ರಜಿಸ್ಟರ್
16. ಮುದ್ದೇಮಾಲು ಜಪ್ತ ರಜಿಸ್ಟರ್
17. ಸರಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುವ ವಸ್ತುಗಳ & ವಿಲೇವಾರಿ ಕುರಿತು ರಜಿಸ್ಟರ್.
18. ಮಿಸಲೇನಿಯಸ್ ರಜಿಸ್ಟರ್.
19. ಅಬಕಾರಿ ವಸ್ತುಗಳ ನಿಗಧಿತ ಗುರಿ ಸಾಧನೆಯ ಪ್ರಗತಿ ರಜಿಸ್ಟರ್
20. ಅಬಕಾರಿ ರಾಜಸ್ವ ಸಂಗ್ರಹಣೆ ರಜಿಸ್ಟರ್.

**7. ಅದರ ಕಾರ್ಯನೀತಿಯ ರಚನೆ ಅಥವಾ ಅದರ ಅನುಷ್ಟಾನಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರೊಡನೆ ಸಮಾಲೋಚಿಸಲು ಅಥವಾ ಅವರ ಪ್ರಾತಿನಿಧ್ಯವಿರುವಂತೆ ಮಾಡಲು ಇರುವಂಥ ಯಾವುದೇ ವ್ಯವಸ್ಥೆಯ ವಿವರಗಳು.**

ಅಬಕಾರಿ ಇಲಾಖೆ ಕಾರ್ಯವು ನಿಗಧಿತ ರಾಜ್ಯ ಅಬಕಾರಿ ಕಾಯ್ದೆ ಕೈಪಿಡಿಯಲ್ಲಿ ನೀಡಿದ ಸೂಚನೆಗಳನ್ವಯ ಕಾರ್ಯನಿರ್ವಹಿಸಬೇಕಾಗಿದ್ದು, ಜನಪ್ರತಿನಿಧಿಗಳೊಂದಿಗೆ ಸಮಾಲೋಚನೆ ಮಾಡುವ ಸಂದರ್ಭ ಬರುವುದಿಲ್ಲ.

**8. ಮಂಡಳಿಗಳು ಪರಿಷತ್ತುಗಳು ಸಮೀತಿಗಳು ಅಥವಾ ಇತರೆ ನಿಕಾಯಗಳು ಮತ್ತು ಅದರ ಭಾಗವಾಗಿ ಅಥವಾ ಅದರ ಸಲಹೆಯ ಉದ್ದೇಶಕ್ಕಾಗಿ ರಚಿತವಾದ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳನ್ನೊಳಗೊಂಡ ಮಂಡಳಿಗಳ ಪರತ್ತುಗಳು ಸಮೀತಿಗಳ ಮತ್ತು ಇತರೆ ನಿಕಾಯಗಳ ಸಭೆಗಳು ಸಾರ್ವಜನಿಕರಿಗೆ ಮುಕ್ತಾಯವಾಗಿರುತ್ತವೆಯೆ ಅಥವಾ ಅಂತಹ ಸಭೆಯ ನಡುವಳಿಗಳು ಸಾರ್ವಜನಿಕರಿಗೆ ದೊರೆಯುತ್ತವೆಯೇ ಎಂಬುದರ ವಿವರ ಪಟ್ಟಿ ಏನು.**

ಅಕ್ರಮ ಮಧ್ಯ ಮಾರಾಟ (ಕಳ್ಳಭಟ್ಟಿ ಸಾರಾಯಿ, ನಕಲಿ ಮದ್ಯ), ದಿಂದಾಗುವ ದುಷ್ಪರಿಣಾಮಗಳ ಕುರಿತು ಗ್ರಾಮ ಸಭೆಗಳನ್ನು ನಡೆಸುತ್ತಿದ್ದು ಆದರೆ ಕಛೇರಿಯ ಕಾರ್ಯ ನೀತಿಯು ಗುಪ್ತವಾಗಿದ್ದ ಕಾರಣ ಸಾರ್ವಜನಿಕರಿಗೆ ಸಭೆಯ ನಡುವಳಿಗಳನ್ನು ನೀಡಲು ಅವಕಾಶವಿರುವುದಿಲ್ಲ.

**9. ಅಧಿಕಾರಿಗಳು ಹಾಗೂ ನೌಕರರ ನಿರ್ದೇಶಿಕೆ ಏನು :**

ಸರ್ಕಾರದ ಆದೇಶ ಸಂಖ್ಯೆ : ಎಫ್.ಡಿ/42/ಇಪಿಎಸ್/2007(1), ಬೆಂಗಳೂರು ದಿನಾಂಕ : 24 ನೇ ಮಾರ್ಚ್ 2008.

ಅಬಕಾರಿ ಇಲಾಖೆಯ ಕಾರ್ಯನಿರ್ವಾಹಕ ಕ್ಷೇತ್ರಾಧಿಕಾರಿಗಳ ಕರ್ತವ್ಯ ಮತ್ತು ಜವಾಬ್ದಾರಿಗಳು.

| | |
|---|---|
| **ಅಬಕಾರಿ ನಿರೀಕ್ಷಕರು** | 1. ಸನ್ನದು ಅಂಗಡಿಗಳ ತಪಾಸಣೆ |
| | 2. ರಹದಾರಿ ಪತ್ರ ನೀಡುವುದು. |
| | 3. ಕರ್ನಾಟಕ ಅಬಕಾರಿ ಕಾಯ್ದೆ ಹಾಗೂ ಎನ್.ಡಿ.ಪಿ.ಎಸ್ ಕಾಯ್ದೆಯಡಿಯಲ್ಲಿ ದಾಖಲಾದ ಪ್ರಕರಣಗಳಿಗೆ ಸಂಬಂಧಿಸಿದಂತೆ ತನಿಖೆ ನ್ಯಾಯಾಲಯಕ್ಕೆ ಅಂತಿಮ ವರದಿ ಸಲ್ಲಿಸುವುದು. |

| | |
|---|---|
| | 4. ಅಬಕಾರಿ ಉಪ ಆಯುಕ್ತರ ನಿರ್ದೇಶನದಂತೆ ಹಳೆ ಬಾಕಿ ವಸೂಲಾತಿಗೆ ಸಂಬಂಧಿಸಿದಂತೆ ಸೂಕ್ತ ಕ್ರಮ ಕೈಗೊಳ್ಳುವುದು. |
| | 5. ಅಬಕಾರಿ ವಸ್ತುಗಳ ಬಳಕೆಯನ್ನು ಅಭಿವೃದ್ಧಿಗೊಳಿಸುವುದು. |
| | 6. ಕಳ್ಳಭಟ್ಟಿ ನಕಲಿ ಮಧ್ಯ ತಯಾರಿಕೆ ಸಂಗ್ರಹಣೆ ಸಾಗಾಣಿಕೆ ಮತ್ತು ತೆರಿಗೆ ರಹಿತ ರೆಕ್ಟಿಫೈಡ್ ಸ್ಪಿರಿಟ್ ಶೇಂದಿ ಮಾದಕ ವಸ್ತುಗಳ ಮಾರಾಟವನ್ನು ತಡೆಗಟ್ಟುವುದು. |
| | 7. ತಮ್ಮ ಕಾರ್ಯ ವ್ಯಾಪ್ತಿಯಲ್ಲಿ ಕೈಗೊಳ್ಳುವ ಜಾರಿ ಮತ್ತು ತನಿಖಾ ಕಾರ್ಯಗಳ ಸಂಘಟನೆ ಮತ್ತು ಮೇಲುಸ್ತುವಾರಿ ಕಾರ್ಯ (ಗುಪ್ತ ಮಾಹಿತಿ ಸಂಗ್ರಹಣೆ ರಸ್ತೆ ಗಸ್ತು ರಾತ್ರಿಕಾವಲು ಕಳ್ಳಭಟ್ಟಿ ಕೇಂದ್ರಗಳು ಹಾಗೂ ನಕಲಿ ಮಧ್ಯ ತಯಾರಿಕಾ ಕೇಂದ್ರಗಳ ಮೇಲೆ ಅಬಕಾರಿ ದಾಳಿ ಇತರೆ). |
| | 8. ಅಬಕಾರಿ ಉಪ ನಿರೀಕ್ಷಕರು ಅಬಕಾರಿಹಿರಿಯ ರಕ್ಷಕರು ಹಾಗೂ ರಕ್ಷಕರ ಕಾರ್ಯನಿರ್ವಹಣೆಯ ಮೇಲುಸ್ತುವಾರಿ ಹಾಗೂ ಮಾರ್ಗದರ್ಶನ ನೀಡುವುದು. |
| | 9. ಕಾನೂನಿನ್ವಯ ಚಾರ್ಜಶೀಟ ಮಾಡಿದಂತಹ ಪ್ರಕರಣಗಳನ್ನು ವಿಲೇವಾರಿಗೊಳಿಸಲು ಜರೂರ ಕ್ರಮ ಕೈಗೊಳ್ಳುವುದು. |
| | 10. ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ರ ಅಡಿಯಲ್ಲಿ ಪ್ರಕರಣಗಳನ್ನು ಇತ್ಯರ್ಥಪಡಿಸಲು ಪ್ರಾಧೀಕೃತ ಅಧಿಕಾರಿಗಳೊಂದಿಗೆ ಸಹಕರಿಸುವುದು. |
| | 11. ಕರ್ನಾಟಕ ಅಬಕಾರಿ ಕಾಯ್ದೆ ಹಾಗೂ ಎನ್.ಡಿ.ಪಿ.ಎಸ್ ಕಾಯ್ದೆಯಡಿಯಲ್ಲಿ ಪ್ರಕರಣ ದಾಖಲು ಮಾಡಿ ತನಿಖೆ ಮುಗಿಸಿ ನ್ಯಾಯಾಲಯದಲ್ಲಿ ಅಂತಿಮ ಆರೋಪ ಪಟ್ಟಿಯನ್ನು ಸಲ್ಲಿಸುವುದು. |
| | 12. ಹಳೇ ಬಾಕಿ ವಸೂಲಾತಿಗೆ ಸಂಬಂಧಿಸಿದಂತೆ ಬಾಕಿದಾರರ ಆಸ್ತಿಯನ್ನು ಗುರುತಿಸಿ ಅವರ ಮೇಲೆ ಕ್ರಮ ಕೈಗೊಳ್ಳಲು ಕಂದಾಯ ಇಲಾಖೆಯ ಅಧಿಕಾರಿಗಳೊಂದಿಗೆ ಸಹಕರಿಸುವುದು. |
| | 13. ವಿಲೇವಾರಿಯಾಗದ ಅಡಿಟ್ ಪ್ಯಾರಾ (ಸ್ಥಳೀಯ ಮತ್ತು ಅಂತರಿಕ) ಗಳನ್ನು ವಿಲೇವಾರಿಗೊಳಿಸಲು ಸೂಕ್ತ ಕ್ರಮಕೈಗೊಳ್ಳುವುದು. |
| | 14. ವಲಯ ವ್ಯಾಪ್ತಿಯಲ್ಲಿ ಅಬಕಾರಿ ಅಪರಾಧಗಳಿಗೆ ಸಂಬಂಧಪಟ್ಟಂತೆ ಗುಪ್ತ ಮಾಹಿತಿ ಸಂಗ್ರಹಿಸುವುದು. ವಲಯವಾರು ವಿವರಗಳನ್ನು ಸಂಗ್ರಹಿಸುವುದು ಹಾಗೂ ಅಬಕಾರಿ ಅಪರಾಧಗಳಲ್ಲಿ ತೊಡಗಿರುವ ಸಮಾಜ ಘಾತುಕ ವ್ಯಕ್ತಿಗಳ ಪೂರ್ವೋತ್ತರ ದಸ್ತಾವೇಜುಗಳನ್ನು ಕಾಯ್ದೆಯಡಿ ಜರುಗಿಸಲು ಸಹಕರಿಸುವುದು. |
| | 15. ತಾಲ್ಲೂಕುಮಟ್ಟದ ಪೋಲಿಸ್ ಅಧಿಕಾರಿಗಳೊಂದಿಗೆ ಸಂಪರ್ಕ ಹೊಂದಿ ಗುಪ್ತ ಮಾಹಿತಿ ವಿಚಾರ ವಿನಿಮಯ ಮಾಡಿಕೊಂಡು ಅದರಂತೆ ಕಾರ್ಯಾಚರಣೆ ನಡೆಸುವುದು ಗುಪ್ತ ಮಾಹಿತಿಯನ್ನು ಅಬಕಾರಿ ಉಪ ಅಧೀಕ್ಷಕರು ಉಪ ವಿಭಾಗ ಇವರಿಗೆ ನೀಡುವುದು. |
| ಅಬಕಾರಿ ಉಪ ನಿರೀಕ್ಷಕರು | 1. ಸನ್ನದು ಅಂಗಡಿಗಳ ತಪಾಸಣೆ |
| | 2. ಕರ್ನಾಟಕ ಅಬಕಾರಿ ಕಾಯ್ದೆಯಡಿಯಲ್ಲಿ ದಾಖಲಾದ ಪ್ರಕರಣಗಳಿಗೆ ಸಂಬಂಧಿಸಿದಂತೆ ತನಿಖೆ ನಡೆಸಿ ನ್ಯಾಯಾಲಯಕ್ಕೆ ಅಂತಿಮ ವರದಿ ಸಲ್ಲಿಸುವುದು. |
| | 3. ಅಬಕಾರಿ ಉಪ ಆಯುಕ್ತರ ನಿರ್ದೇಶನದಂತೆ ಹಳೇ ಬಾಕಿ ವಸೂಲಾತಿಗೆ ಸಂಬಂಧಿಸಿದಂತೆ ಸೂಕ್ತ ಕ್ರಮ ಕೈಗೊಳ್ಳುವುದು. |
| | 4. ಅಬಕಾರಿ ವಸ್ತುಗಳ ಬಳಕೆಯನ್ನು ಅಭಿವೃದ್ಧಿಗೊಳಿಸುವುದು. |
| | 5. ತಮ್ಮ ಕಾರ್ಯವ್ಯಾಪ್ತಿಯಲ್ಲಿ ಕೈಗೊಳ್ಳುವ ಜಾರಿ ಮತ್ತು ತನಿಖಾ ಕಾರ್ಯಗಳ ಸಂಘಟನೆ ಮತ್ತು ಮೇಲುಸ್ತುವಾರಿ ಕಾರ್ಯ (ಗುಪ್ತ ಮಾಹಿತಿ ಸಂಗ್ರಹಣೆ ರಸ್ತೆ ಗಸ್ತು ರಾತ್ರಿ ಕಾವಲು ಕಳ್ಳಭಟ್ಟಿ ಕೇಂದ್ರಗಳು ಹಾಗೂ ನಕಲಿ ಮಧ್ಯ ತಯಾರಿಕಾ ಕೇಂದ್ರಗಳ ಮೇಲೆ ಅಬಕಾರಿ ದಾಳಿ ಇತರೆ). |
| | 6. ಕಳ್ಳಭಟ್ಟಿ ನಕಲಿ ಮಧ್ಯ ತಯಾರಿಕೆ ಸಂಗ್ರಹಣೆ ಸಾಗಾಣಿಕೆ ಮತ್ತು ತೆರಿಗೆ ರಹಿತ ರೆಕ್ಟಿಫೈಡ್ ಸ್ಪಿರಿಟ್ ಶೇಂದಿ ಮಾದಕ ವಸ್ತುಗಳ ಮಾರಾಟವನ್ನು ತಡೆಗಟ್ಟುವುದು. |
| | 7. ಗಾಂಜಾ ಗಿಡ ಬೆಳೆಸುವುದು ಅಥವಾ ಇತರೆ ಯಾವುದೇ ಮಾದಕ ವಸ್ತುಗಳಿಗೆ ಸಂಬಂಧಿಸಿದಂತೆ ಮಾಹಿತಿ ಸಂಗ್ರಹಣೆ ಹಾಗೂ ದಾಖಲೆಗಳ ನಿರ್ವಹಣೆ |
| | 8. ಕಾನೂನಿನ್ವಯ ಚಾರ್ಜ ಶೀಟ ಮಾಡಿದಂತಹ ಪ್ರಕರಣಗಳನ್ನು ವಿಲೇವಾರಿಗೊಳಿಸಲು ಜರೂರ ಕ್ರಮ ಕೈಗೊಳ್ಳುವುದು. |
| | 9. ಕರ್ನಾಟಕ ಅಬಕಾರಿ ಕಾಯ್ದೆ 1965 ರ ಕಲಂ 43 ರ ಅಡಿಯಲ್ಲಿ ಪ್ರಕರಣಗಳನ್ನು ಇತ್ಯರ್ಥಪಡಿಸಲು ಪ್ರಾಧಿಕೃತ ಅಧಿಕಾರಿಗಳಿಗೆ ಸಹಕರಿಸುವುದು. |

| | | |
|---|---|---|
| **ಅಬಕಾರಿ ಹಿರಿಯ ರಕ್ಷಕ** | 1. | ಕಾರ್ಯವ್ಯಾಪ್ತಿಯಲ್ಲಿನ ಜಿಲ್ಲೆಗಳ ಅಬಕಾರಿ ಅಪರಾಧಗಳಿಗೆ ಸಂಬಂಧಿಸಿದಂತೆ ತಡೆಗಟ್ಟಲು ಸಂಪೂರ್ಣ ಜವಾಬ್ದಾರರಾಗಿರುತ್ತಾರೆ. ಜಿಲ್ಲೆಗಳ ವ್ಯಾಪ್ತಿಯಲ್ಲಿ ಜಾರಿ ಮತ್ತು ತನಿಖೆ ಕಾರ್ಯ ಚಟುವಟಿಕೆಗಳನ್ನು ಚುರುಕುಗೊಳಿಸಿ ಅಪರಾಧಗಳನ್ನು ತಡೆಗಟ್ಟುವಲ್ಲಿ ಸಂಪೂರ್ಣ ಜವಾಬ್ದಾರರಾಗಿರುತ್ತಾರೆ. |
| | 2. | ಪ್ರತಿದಿನ ಕಾರ್ಯ ವ್ಯಾಪ್ತಿಯಲ್ಲಿ ಅಬಕಾರಿ ಚಟುವಟಿಕೆ ಹಾಗೂ ಅಪರಾಧಗಳಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಿ ತನ್ನ ಅಧೀನ ಸಿಬ್ಬಂದಿಯವರಿಗೆ ಸೂಕ್ತ ಕ್ರಮಕ್ಕಾಗಿ ಆದೇಶಿಸಿ ಅಪರಾಧಗಳನ್ನು ತಡೆಗಟ್ಟುವಲ್ಲಿ ಕಾರ್ಯೋನ್ಮುಖರಾಗಿ ಕರ್ತವ್ಯ ನಿರ್ವಹಿಸತಕ್ಕದ್ದು. |
| | 3. | ಪ್ರತಿದಿನ ತಮ್ಮ ಕಾರ್ಯ ವ್ಯಾಪ್ತಿಯಲ್ಲಿನ ಅಬಕಾರಿ ಚಟುವಟಿಕೆ ಹಾಗೂ ಅಪರಾಧಗಳಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಸಂಗ್ರಹಿಸಿ ಅದನ್ನು ಅಬಕಾರಿ ಆಯುಕ್ತರ ಕಛೇರಿಯ ಅಪರ ಅಬಕಾರಿ ಆಯುಕ್ತರು (ಅಪರಾಧ ಮತ್ತು ಜಾರಿ) ಯವರಿಗೆ ಫ್ಯಾಕ್ಸ ಅಥವಾ ದೂರವಾಣಿ ಮೂಲಕ ಒದಗಿಸತಕ್ಕದ್ದು. |
| **ಅಬಕಾರಿ ರಕ್ಷಕರು** | 1. | ಹಿರಿಯ ಅಧಿಕಾರಿಗಳ ನಿರ್ದೇಶನದಂತೆ ಗಸ್ತು ತಿರುಗಿ ಕರ್ನಾಟಕ ಅಬಕಾರಿ ಕಾಯ್ದೆ ಹಾಗೂ ಎನ್.ಡಿ.ಪಿ.ಎಸ್ ಕಾಯ್ದೆಯಡಿಯಲ್ಲಿ ಅಕ್ರಮ ಚಟುವಟಿಕೆಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸಂಗ್ರಹಿಸಿ ತಮ್ಮ ಮೇಲಾಧಿಕಾರಿಗಳಿಗೆ ಒದಗಿಸುವುದು. |
| | 2. | ಪ್ರಥಮ ಮಾಹಿತಿ ವರದಿ ಅಂತಿಮ ದೋಷಾರೋಪಣಾ ಪಟ್ಟಿ, ಸಿಸಿ ವರದಿಗಳನ್ನು ನ್ಯಾಯಾಲಯಕ್ಕೆ ಸಲ್ಲಿಸುವುದು, ಸಿಸಿ ನಂ. ಸಮನ್ಸ ನ್ಯಾಯಾಲಯದಿಂದ ಪಡೆದು ಸಮನ್ಸಗಳನ್ನು ಸಾಕ್ಷಿದಾರರಿಗೆ ಹಾಗೂ ಆರೋಪಿತರಿಗೆ ಜಾರಿಗೊಳಿಸುವುದು. |
| | 3. | ದಸ್ತಗಿರಿ ಮಾಡಲಾದ ಅಪರಾಧಿಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿ ನ್ಯಾಯಾಂಗ ಬಂಧನಕ್ಕೆ ಸಂದರ್ಭದಲ್ಲಿ ಅಪರಾಧಿಯನ್ನು ಕಾರಾಗೃಹಕ್ಕೆ ಒಪ್ಪಿಸುವುದು ಅಪರಾಧಿಯ ಸುರಕ್ಷತೆ ಹಾಗೂ ತಪ್ಪಿಸಿಕೊಳ್ಳದಂತೆ ನೋಡಿಕೊಳ್ಳುವುದು. |
| | 4. | ಅಬಕಾರಿ ದಾಳಿ ಸಂದರ್ಭದಲ್ಲಿ ಸನ್ನದು ಅಂಗಡಿಗಳ ತಪಾಸಣೆ ಸಮಯದಲ್ಲಿ ರಾತ್ರಿ ಗಸ್ತು ಮತ್ತು ರಸ್ತೆಗಾವಲು ಸಂದರ್ಭದಲ್ಲಿ ಅಕ್ರಮ ಸಾಗಾಣಿಕೆ ಸಂಗ್ರಹಣೆ ಅಕ್ರಮ ಮಾರಾಟ ಸಂದರ್ಭಗಳಲ್ಲಿ ಅಬಕಾರಿ ವಸ್ತುಗಳು ಹಾಗೂ ವಾಹನಗಳನ್ನು ವಶಪಡಿಸಿಕೊಳ್ಳಲು ತನಿಖಾಧಿಕಾರಿಗಳಿಗೆ ಸಹಾಯ ಮಾಡುವುದು ಹಾಗೂ ವಶಪಡಿಸಿಕೊಂಡ ವಸ್ತುಗಳು ಹಾಗೂ ವಾಹನಗಳನ್ನು ಸುರಕ್ಷತೆ ಬಗ್ಗೆ ಪ್ರಕರಣ ಮುಗಿಯುವವರೆಗೆ ನಿಗಾ ವಹಿಸುವುದು ಪ್ರಥಮ ವರ್ತಮಾನ ವರದಿಯನ್ನು ದಾಖಲು ಮಾಡಲು ತನಿಖಾಧಿಕಾರಿಗಳಿಗೆ ಸಹಾಯ ಮಾಡುವುದು. |
| | 5. | ರಸಾಯನಿಕ ಮಾದರಿಗಳನ್ನು ರಸಾಯನಿಕ ಪ್ರಯೋಗಾಲಯಕ್ಕೆ ತೆಗೆದುಕೊಂಡು ಹೋಗಿ ಪರೀಕ್ಷೆಯ ನಂತರ ವರದಿ ತರುವುದು. |
| | 6. | ಸಾರ್ವಜನಿಕ ಸ್ಥಳಗಳಲ್ಲಿ ಇರುವಂತಹ ಅಕ್ರಮ ಅಬಕಾರಿ ವಸ್ತುಗಳನ್ನು ವಶಪಡಿಸಿಕೊಂಡು ಮುಂದಿನ ಸೂಕ್ತ ಕ್ರಮಕ್ಕಾಗಿ ಮೇಲಾಧಿಕಾರಿಗಳಿಗೆ ಒಪ್ಪಿಸುವುದು. |
| | 7. | ಪ್ರಾದೇಶಿಕ ಸಾರಿಗೆ ಕಛೇರಿಯಿಂದ ವಶಪಡಿಸಿಕೊಂಡ ವಾಹನದ ಬಿ ಎಕ್ಸಟ್ರ್ಯಾಕ್ಟ್ ಪ್ರತಿಯನ್ನು ತರುವುದು. ಕಛೇರಿಗೆ ಸಂಬಂಧಿಸಿದ ಟಪಾಲನ್ನು ನಿಗಧಿಪಡಿಸಿದ ವಿಳಾಸಕ್ಕೆ ತಲುಪಿಸುವುದು ಮತ್ತು ತರುವುದು. |
| | 8. | ಕರ್ತವ್ಯದಲ್ಲಿರುವ ಸಮಯದಲ್ಲಿ ಸಮವಸ್ತ್ರ ಹಾಗೂ ಇಲಾಖೆ ನೀಡಿರುವ ಸುರಕ್ಷತಾ ವಸ್ತುಗಳನ್ನು ಹೊಂದಿರತಕ್ಕದ್ದು. |
| | 9. | ಅಬಕಾರಿ ಪ್ರಕರಣಗಳಲ್ಲಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಸ್ವತ್ತನ್ನು ವಿಲೇವಾರಿ/ನಾಶ ಮಾಡುವ ಪ್ರಕ್ರಿಯೆಯಲ್ಲಿ ಭಾಗವಹಿಸಿ ಕಾರ್ಯನಿರ್ವಹಿಸುವುದು. |
| | 10. | ಕರ್ತವ್ಯ ನಿರ್ವಹಿಸಿರುವ ಬಗ್ಗೆ ಮಾಹಿತಿಗಳನ್ನು ಕ್ರಮ ಬದ್ಧವಾಗಿ ಒಂದು ಪುಸ್ತಕದಲ್ಲಿ ಬರೆದು ನಿರ್ವಹಿಸತಕ್ಕದ್ದು. |
| ವಾಹನ ಚಾಲಕರು | 1. | ಕರ್ತವ್ಯದಲ್ಲಿರುವ ಸಮಯದಲ್ಲಿ ಸಮವಸ್ತ್ರ ಧರಿಸುವುದು. |
| | 2. | ಅಬಕಾರಿ ದಾಳಿಯ ಸಮಯದಲ್ಲಿ ಸಂಧಿಗ್ಧ ಪರಿಸ್ಥಿತಿಯ ಸಮಯದಲ್ಲೂ ವಾಹನದ ಸುರಕ್ಷತೆಯನ್ನು ಸಾಧ್ಯವಾದಷ್ಟು ನಿರ್ವಹಿಸತಕ್ಕದ್ದು. |
| | 3. | ವಾಹನವನ್ನು ಎಲ್ಲಾ ಸಮಯದಲ್ಲೂ ಉತ್ತಮ ಹಾಗೂ ಚಾಲನಾ ಸ್ಥಿತಿಯಲ್ಲಿ ಇಡತಕ್ಕದ್ದು. |
| | 4. | ವಾಹನದ ಲಾಗ್ ಪುಸ್ತಕವನ್ನು ನಿರ್ವಹಿಸುವುದು. |
| | 5. | ವಾಹನದಲ್ಲಿ ಉದ್ಭವಿಸಬಹುದಾದ ತೊಂದರೆಗಳನ್ನು ಪತ್ತೆ ಹಚ್ಚಿ ಹಿರಿಯ ಅಧಿಕಾರಿಗಳಿಗೆ ವರದಿ ಸಲ್ಲಿಸಿ ವಾಹನವನ್ನು ಸುಸ್ಥಿತಿಯಲ್ಲಿ ಇಡತಕ್ಕದ್ದು. |

| | |
|---|---|
| | 6. ನಿಗಧಿತ ಸಮಯಕ್ಕೆ ಸರಿಯಾಗಿ ವಾಹನ ವಿಮೆಯನ್ನು ನವೀಕರಣಗೊಳಿಸುವುದು. |
| | 7. ವಾಹನ ದುರಸ್ತಿಗೆ ಸಂಬಂಧಿಸಿದಂತೆ ಅಧಿಕೃತ ಸಂಸ್ಥೆಗಳಿಂದ ದರಪಟ್ಟಿಯನ್ನು ತರುವುದು. |
| | 8. ಅಧಿಕಾರಿಗಳು ನಿರ್ದೇಶನದಂತೆ ನಿಗಧಿಪಡಿಸಿದ ಯಾವುದೇ ಸ್ಥಳ/ಸಮಯದಲ್ಲಿ ವಾಹನದೊಂದಿಗೆ ಹಾಜರಿರುವುದು. |

ಅಬಕಾರಿ ನಿರೀಕ್ಷಕರ ಕಾರ್ಯಾಲಯ ಬಸವನ ಬಾಗೇವಾಡಿ ಕಛೇರಿಯ ಸಿಬ್ಬಂದಿಯ ವಿವರ ಈ ಕೆಳಗಿನಂತಿರುತ್ತದೆ.

| ಅ. ನಂ | ಹುದ್ದೆಯ ಹೆಸರು | ಅಧಿಕಾರಿ ನೌಕರರ ಹೆಸರು | ಮಂಜೂರಾದ ಹುದ್ದೆ | ಕಾರ್ಯ ನಿರ್ವಹಿಸುತ್ತಿರುವ ಹುದ್ದೆ | ಖಾಲಿ ಇರುವ ಹುದ್ದೆ |
|---|---|---|---|---|---|
| 01 | ಅಬಕಾರಿ ನಿರೀಕ್ಷಕರು | ಡಿ.ಎಸ್.ಚವ್ಹಾಣ | 01 | 01 | – |
| 02 | ಅಬಕಾರಿ ಉಪನಿರೀಕ್ಷಕರು | ಜಿ.ಎಸ್.ಪಾಟೀಲ | 02 | 01 | 01 |
| 03 | ಅಬಕಾರಿ ದ್ವಿ.ದ.ಸಹಾಯಕ | ಎಮ್.ಎಸ್.ಮೋಟಗಿ | 01 | 01 | – |
| 04 | ಅಬಕಾರಿ ಹಿರಿಯ ರಕ್ಷಕ | ಎ.ಎಚ್.ಭಾಗವಾನ | 01 | 01 | – |
| 05 | ಅಬಕಾರಿ ರಕ್ಷಕ | ಎಸ್.ಡಿ.ಜೋಶಿ | 07 | 07 | – |
| 06 | ಅಬಕಾರಿ ರಕ್ಷಕ | ಎನ್.ಆರ್.ಪಾಟೀಲ | | | |
| 07 | ಅಬಕಾರಿ ರಕ್ಷಕ | ಎ.ಎಮ್,ಪತ್ತಾರ | | | |
| 08 | ಅಬಕಾರಿ ರಕ್ಷಕ | ಬಿ.ಪಿ.ತಳಕೇರಿ | | | |
| 09 | ಅಬಕಾರಿ ರಕ್ಷಕ | ಬಿ.ಎಸ್.ನಾಗಠಾಣ | | | |
| 10 | ಅಬಕಾರಿ ರಕ್ಷಕ | ಎಸ್.ಎ.ಹುಂಡೇಕಾರ | | | |
| 11 | ಅಬಕಾರಿ ರಕ್ಷಕ | ಆಯ್.ಡಿ.ಹಾದಿಮನಿ | | | |

**10. ಆದರೆ ವಿನಿಮಯಗಳಲ್ಲಿ ಉಪಬಂಧಿಸಿರುವಂತೆ ಪರಿಹಾರದ ವ್ಯವಸ್ಥೆಯ ಸೇರಿದಂತೆ ಅದರ ಪ್ರತಿಯೊಬ್ಬ ಅಧಿಕಾರಿ ಮತ್ತು ನೌಕರರು ಪಡೆಯುವ ತಿಂಗಳ ಗೌರವಧನವೇನು;**

| ಕ್ರ.ಸಂ. | ಹುದ್ದೆಯ ಹೆಸರು | ಅಧಿಕಾರಿ, ನೌಕರರ ಹೆಸರು | ವೇತನ ಶ್ರೇಣಿ ರೂ | ಮೂಲವೇತನ |
|---|---|---|---|---|
| 01 | ಅಬಕಾರಿ ನಿರೀಕ್ಷಕರು | ಡಿ.ಎಸ್.ಚವ್ಹಾಣ | 9500–17250 | 11,400 |
| 02 | ಅಬಕಾರಿ ಉಪನಿರೀಕ್ಷಕರು | ಜಿ.ಎಸ್.ಪಾಟೀಲ | 8000–14800 | 8600 |
| 03 | ಅಬಕಾರಿ ದ್ವಿ.ದ.ಸಹಾಯಕ | ಎಮ್.ಎಸ್.ಮೋಟಗಿ | 5800–10500 | 6950 |
| 04 | ಅಬಕಾರಿ ಹಿರಿಯ ರಕ್ಷಕ | ಎ.ಎಚ್.ಭಾಗವಾನ | 6250–12000 | 11,400 |
| 05 | ಅಬಕಾರಿ ರಕ್ಷಕ | ಎಸ್.ಡಿ.ಜೋಶಿ | 5800–10500 | 6800 |
| 06 | ಅಬಕಾರಿ ರಕ್ಷಕ | ಎನ್.ಆರ್.ಪಾಟೀಲ | 5800–10500 | 8200 |
| 07 | ಅಬಕಾರಿ ರಕ್ಷಕ | ಎ.ಎಮ್,ಪತ್ತಾರ | 5800–10500 | 7800 |
| 08 | ಅಬಕಾರಿ ರಕ್ಷಕ | ಬಿ.ಪಿ.ತಳಕೇರಿ | 5800–10500 | 8200 |
| 09 | ಅಬಕಾರಿ ರಕ್ಷಕ | ಬಿ.ಎಸ್.ನಾಗಠಾಣ | 5800–10500 | 7800 |
| 10 | ಅಬಕಾರಿ ರಕ್ಷಕ | ಎಸ್.ಎ.ಹುಂಡೇಕಾರ | 5800–10500 | 8200 |
| 11 | ಅಬಕಾರಿ ರಕ್ಷಕ | ಆಯ್.ಡಿ.ಹಾದಿಮನಿ | 5800–10500 | 8600 |

**11. ಎಲ್ಲಾ ಯೋಜನೆಗಳ ವಿವರಗಳನ್ನು ಸೂಚಿಸುವ ಪ್ರಾಸ್ತಾವಿಕ ವೆಚ್ಚವನ್ನು ಮತ್ತು ಮಾಡಲಾದ ಚಟುವಟಿಕೆಗಳ ವರದಿಯನ್ನು ಸೂಚಿಸಿ ಅದರ ಪ್ರತಿಯೊಂದು ಏಜೆನ್ಸಿಗೆ ಹಂಚಿಕೆ ಮಾಡಲಾದ ಆಯವ್ಯಯ ಏನು.**

ಅನ್ವಯಿಸುವುದಿಲ್ಲ.

**12. ಹಂಚಿಕೆ ಮಾಡಲಾದ ಮೊಬಗಲುಗುಗಳನ್ನೊಳಗೊಂಡ ಸಹಾಯಧನ ಕಾರ್ಯಕ್ರಮಗಳ ಜಾರಿಯ ವಿಧಾನವನ್ನು ಮತ್ತು ಅಂತಹ ಫಲಾನುಭವಿಗಳಿಗೆ ವಿವರಗಳೇನು.**

ಅಬಕಾರಿ ಇಲಾಖೆಗೆ ಅಬಕಾರಿ ಅಕ್ರಮ ಚಟುವಟಿಕೆಗಳ ಕುರಿತು ಮಾಹಿತಿಯನ್ನು ನೀಡಿದ ಮಾಹಿತಿದಾರರಿಗೆ ಗುಪ್ತನಿಧಿಯಿಂದ ಪ್ರೋತ್ಸಾಹ ಧನವನ್ನು ನೀಡಲಾಗುತ್ತಿದೆ. ಮತ್ತು ಸದರಿಯವರ ಹೆಸರುಗಳ ಗೌಪ್ಯತೆಯನ್ನು ಕಾಯ್ದುಕೊಳ್ಳಲಾಗುತ್ತಿದೆ. ಇದಲ್ಲದೇ ಅಬಕಾರಿ ಅಧಿಕಾರಿ ಹಾಗೂ ಸಿಬ್ಬಂದಿಗಳು ಮೌಲ್ಯಾಧಾರಿತ ಗುನ್ನೆಯನ್ನು ದಾಖಲಿಸಿದಲ್ಲಿ ಸದರಿಯವರಿಗೆ ಮತ್ತು ಇವರಿಗೆ ಸಹಕರಿಸಿದವರಿಗೆ ಸೇರಿ ಗರಿಷ್ಠ ರೂ. 12000/– ಗಳ ಪ್ರೋತ್ಸಾಹಧನವನ್ನು ನೀಡಲಾಗುತ್ತಿದೆ.

**13. ಅದು ನೀಡಿರುವ ರಿಯಾಯಿತಿಗಳನ್ನು ಅನುಮತಿ ಪತ್ರಗಳನ್ನು ಅಥವಾ ಅಧಿಕಾರ ಪತ್ರ ಪಡೆಯುವವರ ವಿವರಗಳೇನು.**

ಅನ್ವಯಿಸುವುದಿಲ್ಲ.

**14. ಅದರ ಬಳಿಕ ಲಭ್ಯವಿರುವ ಅಥವಾ ಹೊಂದಿರುವ ವಿದ್ಯುನ್ಮಾನ ರೂಪಕ್ಕೆ ಪರಿವರ್ತಿಸಿರುವ ಮಾಹಿತಿಗೆ ಅದರ ಕೆಲಸದ ಸಮಯವನ್ನೊಳಗೊಂಡಂತೆ ಮಾಹಿತಿ ಪಡೆಯಲು ಸಾರ್ವಜನಿಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರಗಳೇನು.**

ಅನ್ವಯಿಸುವುದಿಲ್ಲ.

**15. ಸಾರ್ವಜನಿಕ ಉಪಯೋಗಕ್ಕಾಗಿ ಗ್ರಂಥಾಲಯ ಅಥವಾ ವಾಚನಾಲಯವನ್ನು ನಿರ್ವಹಿಸುತ್ತಿದ್ದಲ್ಲಿ ಅದರ ಕೆಲಸದ ಸಮಯವನ್ನೊಳಗೊಂಡಂತೆ ಮಾಹಿತಿ ಪಡೆಯಲು ಸಾರ್ವಜನಿಕರಿಗೆ ಲಭ್ಯವಿರುವ ಸೌಲಭ್ಯಗಳ ವಿವರಗಳೇನು.**

ಅನ್ವಯಿಸುವುದಿಲ್ಲ.

**16. ಸಾರ್ವಜನಿಕ ಮಾಹಿತಿ ಅಧಿಕಾರಿಗಳ ಹೆಸರುಗಳು ಪದನಾಮಗಳು ಮತ್ತು ಇತರ ವಿವರಗಳು.**

| ಕ್ರ. ಸಂ. | ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು ಮತ್ತು ಪದನಾಮ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯ ಹೆಸರು ಮತ್ತು ಪದನಾಮ | ಮೇಲ್ಮನವಿ ಪ್ರಾಧಿಕಾರಿ |
|---|---|---|---|
| | ಶ್ರೀ.ಡಿ.ಎಸ್.ಚವ್ಹಾಣ ಅಬಕಾರಿ ನಿರೀಕ್ಷಕರು ಬ.ಬಾಗೇವಾಡಿ ವಲಯ | ಶ್ರೀ.ಜಿ.ಎಸ್.ಪಾಟೀಲ ಅಬಕಾರಿ ಉಪ ನಿರೀಕ್ಷಕರು ಬಸವನ ಬಾಗೇವಾಡಿ ವಲಯ | ಅಬಕಾರಿ ಉಪ ಅಧೀಕ್ಷಕರು ಉಪ ವಿಭಾಗ ವಿಜಾಪೂರ |

17. **ನಿಯಮಿಸಬಹುದಾದಂತ ಇತರೆ ಮಾಹಿತಿಯನ್ನು ಪ್ರಕಟಿಸತಕ್ಕದ್ದು, ಮತ್ತು ಆ ತರುವಾಯ ಪ್ರತಿ ವರ್ಷ ಈ ಪ್ರಕಟಣೆಗಳನ್ನು ಅಂದಿನವರೆಗೆ ಪರಿಸ್ಕರಿಸತಕ್ಕದ್ದು.**

ಇತರೆ ಮಾಹಿತಿಗಳು ಇರುವುದಿಲ್ಲ.

ಅಬಕಾರಿ ನಿರೀಕ್ಷಕರು,
ಪಿ.ಆರ್.571 ಬಸವನ ಬಾಗೇವಾಡಿ ವಲಯ.

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಆರ್‌ಡಿ 412 ಎಲ್‌ಜಿಬಿ 2010, ಬೆಂಗಳೂರು, ದಿನಾಂಕ:23.05.2011**

**ನಮೂನೆ–29**

**68ನೇ ಪ್ರಕರಣದ (5)ನೇ ಉಪ–ಪ್ರಕರಣದ ಮೇರೆಗಿನ ಘೋಷಣೆ–ನಿಯಮ 96**

ಕರ್ನಾಟಕ ಭೂ ಕಂದಾಯ ಅಧಿನಿಯಮ 1964ರ 68ನೇ ಪ್ರಕರಣದ (5)ನೇ ಉಪ– ಪ್ರಕರಣದಿಂದ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಸದರಿ ಪ್ರಕರಣದ (1)ನೇ ಉಪ ಪ್ರಕರಣದ ಮೇರೆಗೆ ಹೊರಡಿಸಿದ 18.06.2010ರ ದಿನಾಂಕದ ಎಲ್ಎನ್‌ಡಿ/ಸಿಆರ್/82/08–09ರ ಕ್ರಮ ಸಂಖ್ಯೆಯ ಅಧಿಸೂಚನೆಯ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಮತ್ತು ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಖರಾಬು ಜಮೀನು ಸಾರ್ವಜನಿಕರ ಉಪಯೋಗಕ್ಕೆ ಅಗತ್ಯವಿಲ್ಲವೆಂದು ವ್ಯವಹರಣೆಗಳ ದಾಖಲೆಗಳನ್ನು ಮತ್ತು ಬೆಂಗಳೂರು ಜಿಲ್ಲಾಧಿಕಾರಿಗಳ ವರದಿಯನ್ನು ರಾಜ್ಯ ಸರ್ಕಾರವು ಪರಿಶೀಲಿಸಿದ ತರುವಾಯ, ಬಿ ಖರಾಬು ಜಮೀನಿನ ಮೇಲಣ ಸಾರ್ವಜನಿಕರ ಹಾಗೂ ವ್ಯಕ್ತಿಗಳ ಎಲ್ಲಾ ಹಕ್ಕುಗಳು ಕೊನೆಗೊಳ್ಳತಕ್ಕುದೆಂದು ಈ ಮೂಲಕ ಘೋಷಿಸಿದೆ.

**ಅನುಸೂಚಿ**

| | |
|---|---|
| ಜಮೀನು ಇರುವ ಗ್ರಾಮ | ಲಗ್ಗೆರೆ ಗ್ರಾಮ |
| ತಾಲ್ಲೂಕು | ಬೆಂಗಳೂರು ಉತ್ತರ |
| ಜಿಲ್ಲೆ | ಬೆಂಗಳೂರು |
| ಸದರಿ ಭಾಗದ ವರ್ಣನೆ | ಖರಾಬು |
| ಸರಿ ಸುಮಾರು ವಿಸ್ತೀರ್ಣ | 0–06 (ಸ.ನಂ.142) |
| ಮೇರೆಗಳು | ಪೂರ್ವಕ್ಕೆ: ರಸ್ತೆ ಮತ್ತು ಸ.ನಂ.142ರ ಉಳಿಕೆ ಸ್ವತ್ತು<br>ಪಶ್ಚಿಮಕ್ಕೆ: ರಸ್ತೆ ಮತ್ತು ಸ.ನಂ.142ರ ಉಳಿಕೆ ಸ್ವತ್ತು<br>ಉತ್ತರಕ್ಕೆ: ರಸ್ತೆ ಮತ್ತು ಎಂ.ಇ.ಸಿ. ಬಡಾವಣೆ.<br>ದಕ್ಷಿಣಕ್ಕೆ: ರಸ್ತೆ ಮತ್ತು ಸ.ನಂ.142ರ ಉಳಿಕೆ ಸ್ವತ್ತು |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಲ್. ಕೃಷ್ಣಪ್ಪ**

ಪಿ.ಆರ್.554 ಪೀಠಾಧಿಕಾರಿ,

ಕಂದಾಯ ಇಲಾಖೆ (ಭೂ.ಮಂ–2)

**ಅಧಿಕೃತ ಅಧಿಕಾರಿ ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ಪ್ರಾದೇಶಿಕ ವಿಭಾಗ, ರಾಮನಗರ ಇವರ ನ್ಯಾಯಾಲಯ**

**ಪ್ರಕಟಣೆ**

**ಸಂಖ್ಯೆ:** ಎ2/ಬಿಯುಡಿ/ಎಫ್.ಓ.ಸಿ–9/08–09 ದಿನಾಂಕ:28.03.2011, 1963ನೇ ಕರ್ನಾಟಕ ಅರಣ್ಯ ಅಧಿನಿಯಮ 71(ಬಿ) ಅನ್ವಯ ನೋಟೀಸ್.

**ವಿಷಯ:** ವಲಯ ಅರಣ್ಯಾಧಿಕಾರಿ, ಕನಕಪುರರವರು ಎಫ್.ಓ.ಸಿ. ಸಂಖ್ಯೆ:9/08–09ರಲ್ಲಿ ಅಮಾನತ್ತುಪಡಿಸಲಾದ ಕರಾಚ ಮರದ ತುಂಡು ಹಾಗೂ ವಾಹನ ಸಂಖ್ಯೆ: ಕೆಎ–25–5669 ಅನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ.

**ಉಲ್ಲೇಖ:** 1) ವಲಯ ಅರಣ್ಯಾಧಿಕಾರಿ, ಚನ್ನಪಟ್ಟಣ ವಲಯ ಇವರ ವರದಿ ದಿನಾಂಕ:14.08.2002.

2) ಪ್ರಾದೇಶಿಕ ಸಾರಿಗೆ ಧಾರವಾಡರವರ ಪತ್ರ ದಿನಾಂಕ:28.10.2008.

3) ಈ ಕಛೇರಿಯ ನೋಟೀಸ್ ದಿನಾಂಕ:31.10.2008.

ವಲಯ ಅರಣ್ಯಾಧಿಕಾರಿ, ಕನಕಪುರ ಇವರು ದಿನಾಂಕ:26.08.2008ರಂದು ಯಾವುದೇ ಪರವಾನಗಿ ಇಲ್ಲದೇ ಕರಾಚ ಮರ ಸಾಗಿಸುತ್ತಿದ್ದ ವಾಹನ ಸಂಖ್ಯೆ: ಕೆಎ–25–5669 ನ್ನು ದಸ್ತಗಿರಿ ಮಾಡಿ ಅರಣ್ಯ ಅಪರಾಧ ಸಂಖ್ಯೆ:9/2008–09ನ್ನು ದಾಖಲಿಸಿಕೊಂಡಿರುತ್ತಾರೆ. ನಂತರ ವಲಯ ಅರಣ್ಯಾಧಿಕಾರಿ, ಕನಕಪುರರವರು ದಿನಾಂಕ:20.09.2008ರಂದು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರರವರಿಗೆ ಸಲ್ಲಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿಯನ್ನು ಹಾಗೂ ದಾಖಲೆಗಳನ್ನು ಪರಿಶೀಲಿಸಲಾಗಿ ವಾಹನ ಸಂಖ್ಯೆ: ಕೆಎ–25–5669ರಲ್ಲಿ ಪರವಾನಗಿ ಇಲ್ಲದೇ ಕರಾಚ ಮರಗಳನ್ನು ಸಾಗಿಸುತ್ತಿರುವುದು ದೃಢಪಟ್ಟಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಮೇರೆಗೆ ಪ್ರಕರಣವನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ರಾಮನಗರ ವಿಭಾಗರವರು ಪ್ರಾರಂಭಿಸಿ ದಿನಾಂಕ:03.10.2008 ರಂದು ಸಾರಿಗೆ ಪ್ರಾದೇಶಿಕ ಅಧಿಕಾರಿ, ಧಾರವಾಡ ಜಿಲ್ಲೆರವರಿಗೆ ಪತ್ರ ಬರೆದು ಮೇಲ್ಕಂಡ ವಾಹನ ಸಂಖ್ಯೆಯ ಮಾಲೀಕತ್ವದ ಬಗ್ಗೆ ಬಿ ರಿಜಿಸ್ಟರ್ ಎಕ್ಸ್‌ಟ್ರಾಕ್ಟ್‌ನ್ನು ಕಳುಹಿಸಲು ಕೋರಲಾಗಿತ್ತು. ಪ್ರಾದೇಶಿಕ ಸಾರಿಗೆ ಅಧಿಕಾರಿ, ಧಾರವಾಡರವರು ಕಳುಹಿಸಿದ ವಿವರಗಳನ್ನು ಪರಿಶೀಲಿಸಲಾಗಿ ವಾಹನವು ಹನುಮರೆಡ್ಡಿ ಮೊರಬ ಬಿನ್ ವೆಂಕಟರೆಡ್ಡಿ ರೇಣುಕಾ ಮಿಲ್ಕ್ ಡೈರಿ, ಆನಂದ ಜ್ಯೋತಿ ಬಿಲ್ಡಿಂಗ್, ಹಳೇ ಹುಬ್ಬಳ್ಳಿ ಇವರ ಹೆಸರಿನಲ್ಲಿರುತ್ತದೆ. ಈ ವಿಳಾಸಕ್ಕೆ ದಿನಾಂಕ:07.05.2009, 03.06.2009, 01.08.2009, 09.09.2009, 11.01.2010, 25.09.2010ರಲ್ಲಿ ನೋಟೀಸ್ ಜಾರಿ ಮಾಡಿ ನಿಮ್ಮ ಹೆಸರಿನಲ್ಲಿರುವ ಮೇಲ್ಕಂಡ ವಾಹನವು ಅರಣ್ಯ ಅಪರಾಧದಲ್ಲಿ ತೊಡಗಿದ್ದ ಕಾರಣ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ)ರ ಮೇರೆಗೆ ಮಾಲೀಕರಿಗೆ ಅನೇಕ ನೋಟೀಸ್ ಜಾರಿ ಮಾಡಿ ಖುದ್ದಾಗಿ ಆಗಲೀ ಅಥವಾ ವಕೀಲರ ಮೂಲಕವಾಗಲೀ ವಿಚಾರಣೆಗೆ ಹಾಜರಾಗಲು ಸೂಚಿಸಲಾಗಿತ್ತು. ಆದರೆ ವಾಹನ ಮಾಲೀಕರಿಗೆ ಕಳುಹಿಸಲಾದ ಎಲ್ಲಾ ನೋಟೀಸ್‌ಗಳು ಸದರಿ ವಿಳಾಸದಲ್ಲಿ No such person ಎಂಬ ಅಂಚೆ ಷರಾದೊಂದಿಗೆ ಹಿಂದಿರುಗಿ ಬಂದಿರುತ್ತದೆ.

ಆದ್ದರಿಂದ ವಾಹನದ ಮಾಲೀಕತ್ವ ಹೊಂದಿದ್ದಲ್ಲಿ ಅಂತಹವರು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿರವರ ಸಮ್ಮುಖದಲ್ಲಿ ಈ ಪ್ರಕಟಣೆಯ ದಿನಾಂಕದಿಂದ 90 ದಿವಸಗಳೊಳಗೆ ವಾಹನದ ಮಾಲೀಕತ್ವದ ದಾಖಲೆಗಳನ್ನು ಹಾಜರುಪಡಿಸಿ ವಾಹನದ ಮಾಲೀಕತ್ವವನ್ನು ಸಾಭೀತು ಪಡಿಸಬಹುದು. ಒಂದು ವೇಳೆ ಈ ನಿಗದಿತ ಅವಧಿಯಲ್ಲಿ ವಾಹನದ ಮಾಲೀಕತ್ವದ ಬಗ್ಗೆ ಯಾವುದೇ ಅಹವಾಲುಗಳು ಸಲ್ಲಿಕೆಯಾಗದಿದ್ದಲ್ಲಿ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಮೇರೆಗೆ ಪ್ರಕರಣದ ವಿಚಾರಣೆಯನ್ನು ನಡೆಸಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸಲಾಗುವುದು.

**ವಿ. ಗೀತಾಂಜಲಿ**

ಪಿ.ಆರ್.346

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ರಾಮನಗರ ವಿಭಾಗ, ರಾಮನಗರ.

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಛೇರಿ, ಬಾಗಲಕೋಟೆ

## ಅಧಿಸೂಚನೆ

### ಸಂಖ್ಯೆ: ಇ2:630: ಪ್ರಾಶಾಶಿ:ಅಗೈರ:29:09–10/761, ದಿನಾಂಕ:23.05.2011

**ವಿಷಯ:** ಶಾಲಾ ಕೆಲಸಕ್ಕೆ ದೀರ್ಘಾವಧಿಯಿಂದ ಅನಧಿಕೃತ ಗೈರು ಉಳಿದ ಶ್ರೀ ಆರ್.ಎನ್.ಧಡೇಕರ, ಸಶಿ.ಸ.ಕಿ.ಪ್ರಾ.ಶಾಲೆ ಪರಪ್ಪನವರ ತೋಟ ಮದರಖಂಡಿ, ತಾ: ಜಮಖಂಡಿ, ಇವರ ಮೇಲೆ ಶಿಸ್ತು ಕ್ರಮ ಜರುಗಿಸುವ ಕುರಿತು.

**ಉಲ್ಲೇಖ:** 1) ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರ ವರದಿ ದಿನಾಂಕ:06.04.2011.

2) ದಿನಾಂಕ:05.05.2011ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ನೋಟೀಸು.

3) ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ:18:ಸೇಇವಿ:2001 ಬೆಂಗಳೂರು ದಿನಾಂಕ:14.09.2001.

**ಪ್ರಸ್ತಾವನೆ:**

ಕ್ಷೇತ್ರ ಶಿಕ್ಷಣಾಧಿಕಾರಿಗಳು, ಜಮಖಂಡಿ ಇವರು ತಮ್ಮ ವಲಯದಲ್ಲಿಯ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಪರಪ್ಪನವರ ತೋಟ ಮದರಖಂಡಿ, ಶಾಲೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಆರ್.ಎನ್. ಧಡೇಕರ, ಸಹ–ಶಿಕ್ಷಕರು, ಇವರು ದಿನಾಂಕ:27.01.2011 ರಿಂದ ಶಾಲಾ ಕೆಲಸಕ್ಕೆ ಅನಧಿಕೃತ ಗೈರು ಉಳಿದಿದ್ದು ಇವರಿಗೆ ಸೇವೆಗೆ ಹಾಜರಾಗುವಂತೆ ಸೂಚಿಸಿ ಸೂಚನಾ ಪತ್ರ ಕಳುಹಿಸಿದರೂ ಸೇವೆಗೆ ಹಾಜರಾಗಿಲ್ಲ. ಇವರ ಅನಧಿಕೃತ ಗೈರು–ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದಾಗಿ ಉಲ್ಲೇಖ 01 ರಡಿ ಈ ಕಛೇರಿಗೆ ವರದಿ ಸ್ವೀಕೃತವಾಗಿರುತ್ತದೆ. ಸದರಿ ಶಿಕ್ಷಕರ ಮಾಹಿತಿಗೆ ಉಲ್ಲೇಖ 2ರಡಿ ದಿನಾಂಕ:05.05.2011ರ ಸಂಯುಕ್ತ ಕರ್ನಾಟಕ ದಿನಪತ್ರಿಕೆಯ ಮೂಲಕ ತಿಳುವಳಿಕೆ ನೀಡಲಾಗಿದ್ದರೂ ಈವರೆಗೂ ಸದರಿ ಶಿಕ್ಷಕರು ಸೇವೆಗೆ ಹಾಜರಾಗುವ ಬಗ್ಗೆ ಪ್ರತಿಕ್ರಿಯಿಸಿರುವುದಿಲ್ಲ. ಇದರಿಂದ ಇವರಿಗೆ ಸೇವೆಯಲ್ಲಿ ಮುಂದುವರೆಯುವ ಇಚ್ಛೆ ಇಲ್ಲವೆಂಬುದಾಗಿ ಪರಿಗಣಿಸಿ ಹಾಗೂ ಇವರ ಗೈರು ಹಾಜರಾತಿಯಿಂದ ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆಯಾಗಿರುವುದನ್ನು ಗಮನಿಸಿ ಸದರಿ ಶಿಕ್ಷಕರ ಮೇಲೆ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಪ್ರಸ್ತಾವನೆಯಲ್ಲಿ ವಿಷದೀಕರಿಸಿದಂತೆ ಶಾಲಾ ಕೆಲಸಕ್ಕೆ ದೀರ್ಘಾವಧಿಯಿಂದ ಅನಧಿಕೃತ ಗೈರು ಉಳಿದು ವಿದ್ಯಾರ್ಥಿಗಳ ಪಾಠ ಬೋಧನೆಗೆ ತೊಂದರೆ ಮಾಡಿದ ಶ್ರೀ ಆರ್.ಎನ್. ಧಡೇಕರ, ಸಹ–ಶಿಕ್ಷಕರು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ ಪರಪ್ಪನವರ ತೋಟ ಮದರಖಂಡಿ, ತಾ:ಜಮಖಂಡಿ, ಇವರ ಮೇಲೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ, 1957)ರ ನಿಯಮಗಳ ನಿಯಮ 9(2) ಸಿ ದಲ್ಲಿಯ ಅಧಿಕಾರ ಚಲಾಯಿಸಿ ಉಲ್ಲೇಖ 03ರ ಸರ್ಕಾರದ ಅಧಿಸೂಚನೆ ಮತ್ತು ಕ.ನಾ.ಸೇ. ನಿಯಮಾವಳಿಗಳ ನಿಯಮ 108 ರನ್ವಯ ಕೂಡಲೇ ಜಾರಿಗೆ ಬರುವಂತೆ ಸದರಿ ಶಿಕ್ಷಕರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದೆ.

ಕ್ಷೇತ್ರ ಶಿಕ್ಷಣಾಧಿಕಾರಿಗಳು ಜಮಖಂಡಿ ಇವರು ಸದರಿ ಆದೇಶದ ವಿವರವನ್ನು ಸಂಬಂಧಿಸಿದ ಶಿಕ್ಷಕರ ಸೇವಾಪುಸ್ತಕದಲ್ಲಿ ತಪ್ಪದೇ ನಮೂದಿಸಿ ಮುಂದಿನ ಅವಶ್ಯಕ ಕ್ರಮ ಕೈಗೊಳ್ಳುವಂತೆ ಸೂಚಿಸಿದೆ.

ಉಪನಿರ್ದೇಶಕರು (ಆಡಳಿತ),
ಸಾರ್ವಜನಿಕ ಶಿಕ್ಷಣ ಇಲಾಖೆ, ಬಾಗಲಕೋಟೆ.

ಪಿ.ಆರ್.572

**ಕರ್ನಾಟಕ ಸರ್ಕಾರ**

**ಕಾರ್ಮಿಕ ಇಲಾಖೆ**

**ಕಾರ್ಮಿಕ ಆಯುಕ್ತರವರ ಕಛೇರಿ, ಕರ್ನಾಟಕ, "ಕಾರ್ಮಿಕ ಭವನ", ಬನ್ನೇರುಘಟ್ಟ ರಸ್ತೆ, ಬೆಂಗಳೂರು–560 029**

**ಅಧಿಸೂಚನೆ**

**ಸಂ. ಜಿಜಡ್‌ಟಿ/ಸಿಆರ್–204/10–11, ದಿನಾಂಕ:10–05–11**

**ವಿಷಯ:** ದಿನಾಂಕ 01–01–11 ರಲ್ಲಿದ್ದಂತೆ ಕಾರ್ಮಿಕ ಅಧಿಕಾರಿಗಳ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ ಪ್ರಕಟಣೆ ಬಗ್ಗೆ.

**ಉಲ್ಲೇಖ:** 1. ದಿನಾಂಕ 08–05–09ರ ಸರ್ಕಾರದ ಅಧಿಸೂಚನೆ ಸಂಖ್ಯೆ ಕಾಇ 72 ಎಲ್‌ಇಟಿ 2008.

2. ದಿನಾಂಕ 09–03–11ರ ಸರ್ಕಾರದ ಪತ್ರ ಸಂಖ್ಯೆ ಕಾಇ 62 ಎಲ್‌ಇಟಿ 2011.

3. ದಿನಾಂಕ 11–02–10ರ ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 46 ಎಸ್‌ಡಿಎ 2008.

4. ದಿನಾಂಕ 18–08–06ರ ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 14 ಎಸ್‌ಎಸ್‌ಆರ್ 2006.

1. ಉಲ್ಲೇಖಿತ(1)ರ ಸರ್ಕಾರದ ಅಧಿಸೂಚನೆಯ ಮೂಲಕ, ದಿನಾಂಕ:01–01–08ರಲ್ಲಿದ್ದಂತೆ ಕಾರ್ಮಿಕ ಅಧಿಕಾರಿಗಳ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲಾಗಿತ್ತು ಹಾಗೂ ಸದರಿ ಅಂತಿಮ ಪಟ್ಟಿಯಲ್ಲಿ ಕ್ರಮ ಸಂಖ್ಯೆ 118ರವರೆಗಿನ ಕಾರ್ಮಿಕ ಅಧಿಕಾರಿಗಳ ಜೇಷ್ಠತೆಯನ್ನು ಅಂತಿಮಗೊಳಿಸಲಾಗಿತ್ತು.

2. ಉಲ್ಲೇಖಿತ (2)ರ ಸರ್ಕಾರದ ಪತ್ರದಲ್ಲಿ – ಉಲ್ಲೇಖಿತ (3)ರ ಅಧಿಸೂಚನೆಯ ಮೂಲಕ, ಗುಂಪು–'ಬಿ' ವೃಂದಕ್ಕೆ, ಇಲಾಖಾ ಮುಖ್ಯಸ್ಥರೇ ನೇಮಕಾತಿ ಪ್ರಾಧಿಕಾರ ಆಗಿರುವುದರಿಂದ ಹಾಗೂ ಉಲ್ಲೇಖಿತ (4)ರ ಅಧಿಸೂಚನೆಯಲ್ಲಿ ನೇಮಕಾತಿ ಪ್ರಾಧಿಕಾರವೇ ಜೇಷ್ಠತಾ ಪಟ್ಟಿಯನ್ನು ತಯಾರಿಸಿ ಪ್ರಕಟಿಸಲು ಅರ್ಹರಿರುತ್ತಾರೆ ಎಂದು ತಿಳಿಸಿರುವುದರಿಂದ, ಕಾರ್ಮಿಕ ಆಯುಕ್ತರ ಹಂತದಲ್ಲಿ ಕಾರ್ಮಿಕ ಅಧಿಕಾರಿಗಳ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಲು ಕ್ರಮ ಕೈಗೊಳ್ಳುವಂತೆ ತಿಳಿಸಲಾಗಿತ್ತು.

3. ಆದ್ದರಿಂದ, ದಿನಾಂಕ 01–01–11ರಲ್ಲಿದ್ದಂತೆ, ಕಾರ್ಮಿಕ ಅಧಿಕಾರಿಗಳ ವೃಂದದ ನೇರ ನೇಮಕಾತಿ ಮತ್ತು ಮುಂಬಡ್ತಿ ಹಂಚಿಕೆಯ ಕೋಷ್ಠಕ (ಅನುಬಂಧ–1) ಮತ್ತು ತಾತ್ಕಾಲಿಕ ಜೇಷ್ಠತಾ ಪಟ್ಟಿ (ಅನುಬಂಧ–2)ಯನ್ನು, 1957ರ ಕರ್ನಾಟಕ ಸರ್ಕಾರಿ ನೌಕರರ (ಜೇಷ್ಠತಾ) ನಿಯಮಾವಳಿಯ ನಿಯಮ 10ರ ಅನುಸಾರ, ಸಂಬಂಧಿಸಿದ ಅಧಿಕಾರಿಗಳ ಮಾಹಿತಿಗಾಗಿ, ಈ ಅಧಿಸೂಚನೆಯ ಮೂಲಕ ಪ್ರಕಟಿಸಲಾಗಿದೆ. ಈ ತಾತ್ಕಾಲಿಕ ಜೇಷ್ಠತಾ ಪಟ್ಟಿಯ ಕ್ರಮ ಸಂಖ್ಯೆ (118)ರವರೆಗಿನ ಅಧಿಕಾರಿಗಳ ಜೇಷ್ಠತೆಯನ್ನು ಉಲ್ಲೇಖಿತ (1)ರ ಅಧಿಸೂಚನೆಯ ಮೂಲಕ ಅಂತಿಮಗೊಳಿಸಲಾಗಿದೆ.

4. ಸದರಿ ಪಟ್ಟಿಯಲ್ಲಿರುವ ಸೇವಾ ವಿವರಗಳ (ಜನ್ಮ ದಿನಾಂಕ, ಸೇವೆಗೆ ಸೇರಿದ ದಿನಾಂಕ, ಜೇಷ್ಠತೆ, ಇತ್ಯಾದಿ) ಬಗ್ಗೆ, ಕ್ರಮ ಸಂಖ್ಯೆ 118ರ ನಂತರದ (119ರಿಂದ) ಸಂಬಂಧಿಸಿದ ಕಾರ್ಮಿಕ ಅಧಿಕಾರಿಗಳು, ಏನಾದರು ಆಕ್ಷೇಪಣೆಗಳನ್ನು ಸಲ್ಲಿಸುವುದಿದ್ದಲ್ಲಿ, ಈ ಕರಡು ಅಧಿಸೂಚನೆಯು ರಾಜ್ಯಪತ್ರದಲ್ಲಿ ಪ್ರಕಟಣೆಯಾದ ದಿನಾಂಕದಿಂದ 30 ದಿನಗಳೊಳಗಾಗಿ ಲಿಖಿತ ಮೂಲಕ, ಕಾರ್ಮಿಕ ಆಯುಕ್ತರು, ಕಾರ್ಮಿಕ ಭವನ, ಡೈರಿ ವೃತ್ತ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–560029 ಇವರಿಗೆ ಸಲ್ಲಿಸುವಂತೆ ಸೂಚಿಸಲಾಗಿದೆ. ಅನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

5. ಹೀಗೆ ಸ್ವೀಕೃತವಾಗುವ ಆಕ್ಷೇಪಣೆಗಳನ್ನು ಪರಿಶೀಲಿಸಿದ ತರುವಾಯ ಕಾರ್ಮಿಕ ಅಧಿಕಾರಿಗಳ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು, ನಿಯಮಾನುಸಾರ, ಪ್ರಕಟಿಸಲಾಗುವುದು.

ಕಾರ್ಮಿಕ ಆಯುಕ್ತರು

**ಅನುಬಂಧ–1**

**ಅಧಿಸೂಚನೆ ಸಂಖ್ಯೆ ಜಿಜಿಡ್‌ಟಿ/ಸಿಆರ್–204/10–11, ದಿನಾಂಕ 10–05–11**

**ದಿನಾಂಕ 01–01–11ರಲ್ಲಿದ್ದಂತೆ ಕಾರ್ಮಿಕ ಅಧಿಕಾರಿಗಳ ವೃಂದದ ನೇರ ನೇಮಕಾತಿ ಮತ್ತು ಮುಂಬಡ್ತಿ ಹಂಚಿಕೆಯ ಕೋಷ್ಟಕ**

ವೃಂದ ಬಲ: 43

| ಬ್ಲಾಕ್ | ಬ್ಲಾಕ್ ಅವಧಿ | ಬ್ಲಾಕ್ ಅವಧಿಯಲ್ಲಿ ಉದ್ಭವಿಸಿದ ರಿಕ್ತ ಸ್ಥಾನಗಳು | ನಿಗದಿತ ಅನುಪಾತ | | ಹುದ್ದೆಗಳ ಅನ್ವಯ ಅನುಪಾತ | | ನೇರ ನೇಮಕಾತಿಯಲ್ಲಿ (ಡಿ ಆರ್) ನೈಜವಾಗಿ ಭರ್ತಿ ಮಾಡಲ್ಪಟ್ಟ ಸ್ಥಾನಗಳು | | ಮುಂಬಡ್ತಿ ಮೂಲಕ ಭರ್ತಿ ಮಾಡಲ್ಪಟ್ಟ ಸ್ಥಾನಗಳು | | | ಜೇಷ್ಠತೆಗೆ ಲೆಕ್ಕಕ್ಕೆ ಬರುವ ಸ್ಥಾನಗಳು | | ಷರಾ |
|---|---|---|---|---|---|---|---|---|---|---|---|---|---|---|
| | | | ಮುಂಬಡ್ತಿ | ನೇರ ನೇಮಕಾತಿ | ಮುಂಬಡ್ತಿ | ನೇರ ನೇಮಕಾತಿ | ಭರ್ತಿ | ಮುಂದುವರೆಸಲ್ಪಟ್ಟವು | ಭರ್ತಿ | ಕೊರತೆ | ಅಧಿಕತೆ | ಮುಂಬಡ್ತಿ | ನೇರ ನೇಮಕಾತಿ | |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** | **15** |
| **No carry forward vacancies from the previous Block** | | | | | | | | | | | | | | |
| VIII | 26–11–82 ರಿಂದ 18–07–83 | 2 | 50% | 50% | 1 | 1 | 1 | – | 1 | – | – | 1 | 1 | |
| IX | 19—07–83 ರಿಂದ 30–07–91 | 18 | 50% | 50% | 9 | 9 | 4 | –05 | 9 | – | – | 4 | 9 | |
| X | 01–08–91 ರಿಂದ 31–03–97 | 16 | 50% | 50% | 8 | 8 | 1 | –(12) | 14 | – | +(6) | 8 | 1 | |
| XI | 01–04–97 ರಿಂದ 25–01–06 | 32 | 50% | 50% | 16 | 16 | 07 | –(21) | 15 | – | +(5) | 16 | 7 | |
| XII | 26–01–06 ರಿಂದ 29–04–06 | 1 | 50% | 50% | 1 | – | 10 | –(11) | – | – | +(4) | 1 | 10 | |
| XIII | 30–04–06 ರಿಂದ 27–11–06 | 1 | 50% | 50% | – | 1 | 1 | –(11) | – | – | +(4) | – | 1 | |
| XIV | 28–11–06 ರಿಂದ ಇಲ್ಲಿಯ ತನಕ | 10 | 50% | 50% | 5 | 5 | – | –(16) | 1 | – | – | 5 | – | |

ಕಾರ್ಮಿಕ ಆಯುಕ್ತರು

ಅನುಬಂಧ–2

ಅಧಿಸೂಚನೆ ಸಂಖ್ಯೆ ಜಿಜಿಡ್‌ಟಿ/ಸಿಆರ್–204/10–11, ದಿನಾಂಕ 10–05–11

ದಿನಾಂಕ 01–01–11ರಲ್ಲಿದ್ದಂತೆ ಕಾರ್ಮಿಕ ಅಧಿಕಾರಿ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿ

ವೃಂದ ಬಲ: 43

| ಕ್ರಮ ಸಂಖ್ಯೆ | ಹೆಸರು ಶ್ರೀಮತಿ / ಶ್ರೀ | ನೇರ ನೇಮಕಾತಿ / ಮುಂಬಡ್ತಿ | ಮೀಸಲಾತಿ ಪ್ರವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಹುದ್ದೆ ಹೊಂದಿದ ದಿನಾಂಕ | ಜೇಷ್ಠತೆಗೆ ನೇಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| | ಬ್ಲಾಕ್–VIII (26–11–82 ರಿಂದ 18–07–83) | | | | | | | |
| 89. | ಎಸ್ ಅಣ್ಣಾಜಿರಾವ್ ಜಾಧವ್ | ಮುಂಬಡ್ತಿ | – | 25–05–39 | 04–05–66 | 11–12–82 | 11–12–82 | |
| 90. | ಎಸ್.ಎಸ್.ಷರೀಫ್ | ನೇ ನೇ | – | 08–10–53 | 18–07–83 | 18–07–83 | 18–07–83 | |
| | ಬ್ಲಾಕ್–IX (19–07–83 ರಿಂದ 30–07–91) | | | | | | | |
| 91. | ಆರ್.ಗೋವಿಂದಪ್ಪ | ಮುಂಬಡ್ತಿ | – | 04–12–31 | 06–05–66 | 21–07–83 | 21–07–83 | |
| 92. | ಜೆ ಎನ್ ಬಿದರಕೆರೆ | ಮುಂಬಡ್ತಿ | – | 05–10–35 | 05–05–66 | 21–07–83 | 21–07–83 | |
| 93. | ಟಿ ಬಸವರಾಜು | ಮುಂಬಡ್ತಿ | – | 22–04–39 | 29–09–66 | 21–07–83 | 21–07–83 | |
| 94. | ಎಚ್ ಎಂ ಇನಾಮ್‌ದಾರ್ | ಮುಂಬಡ್ತಿ | – | 02–03–34 | 01–04–53 | 16–12–87 | 16–12–87 | |
| 95. | ಮೊಹಮದ್ ಹನೀಫ್ | ಮುಂಬಡ್ತಿ | – | 01–01–37 | 07–05–66 | 16–12–87 | 16–12–87 | |
| 96. | ಎಸ್ ಬಿ ಸೊಂಡೂರ್ | ಮುಂಬಡ್ತಿ | – | 24–07–34 | 01–11–58 | 16–12–87 | 16–12–87 | |
| 97. | ಎಸ್ ಆರ್ ಭವಾನೆ | ಮುಂಬಡ್ತಿ | – | 06–10–36 | 11–05–66 | 16–12–87 | 16–12–87 | |
| 98. | ಎಸ್ ಆರ್ ಬೇಟಗೇರಿ | ಮುಂಬಡ್ತಿ | – | 10–02–38 | 30–04–66 | 16–12–87 | 16–12–87 | |
| 99. | ಜೆ ಡಿ ನಾಯಕ್ | ಮುಂಬಡ್ತಿ | ಪ.ಜಾ | 10–01–34 | 06–06–61<br>21–10–67 | 16–12–87 | 16–12–87 | |
| 100. | ಟಿ ಎಂ ರಂಗಸ್ವಾಮಿ | ನೇ ನೇ | – | – | 16–01–91 | 16–01–91 | 16–01–91 | |
| 101. | ಜಿ ರತ್ನಮಾಲಾ | ನೇ ನೇ | – | 26–07–58 | 16–01–91 | 16–01–91 | 16–01–91 | |

| ಕ್ರಮ ಸಂಖ್ಯೆ | ಹೆಸರು ಶ್ರೀಮತಿ / ಶ್ರೀ | ನೇರ ನೇಮಕಾತಿ / ಮುಂಬಡ್ತಿ | ಮೀಸಲಾತಿ ಪ್ರವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಹುದ್ದೆ ಹೊಂದಿದ ದಿನಾಂಕ | ಜೇಷ್ಠತೆಗೆ ನೇಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** |
| 102. | ಬಿ ಕಾಳಯ್ಯ | ನೇ ನೇ | ಪ.ಜಾ | 04–07–56 | 30–07–91 | 30–07–91 | 30–07–91 | |
| 103. | ಇ ಲಕ್ಷ್ಮಪ್ಪ | ನೇ ನೇ | – | 01–02–58 | 30–07–91 | 30–07–91 | 30–07–91 | |
| | **ಬ್ಲಾಕ್–X (01–08–91 ರಿಂದ 31–03–97)** | | | | | | | |
| 104. | ಎಲ್ ಎಸ್ ಸುಬ್ಬ ಜಯರಾಮ್ | ಮುಂಬಡ್ತಿ | – | 04–08–33 | 15–10–58 | 16–12–87 | 01–08–91 | |
| 105. | ಲಕ್ಷ್ಮಿ ಪತಿ | ಮುಂಬಡ್ತಿ | – | 08–11–37 | 07–03–60 | 09–05–90 | 31–10–91 | |
| 106. | ಬಿ ವರದರಾವ್ | ಮುಂಬಡ್ತಿ | – | 21–04–80 | 17–10–60 | 09–05–90 | 09–11–91 | |
| 107. | ಎಸ್ ಸಿ ಬಂಗೇರಾ | ಮುಂಬಡ್ತಿ | – | 18–01–41 | 01–03–62 | 06–11–91 | 01–12–92 | |
| 108. | ದೇವೇಂದ್ರ ಪೂಜಾರಿ | ಮುಂಬಡ್ತಿ | – | 01–07–40 | 07–03–62 | 06–11–91 | 31–12–92 | |
| 109. | ಡಿ.ಕೆ.ಬೆಟ್ಟಯ್ಯ | ಮುಂಬಡ್ತಿ | – | 15–04–41 | 23–03–67 | 28–01–92 | 30–04–93 | |
| 110. | ಹೆಚ್ ಎಸ್ ಬಂಕದಮನಿ | ಮುಂಬಡ್ತಿ | ಎಸ್ ಸಿ | 01–06–51 | 04–08–78 | 26–08–93 | 30–09–93 | |
| 111. | ವೆಂಕಟೇಶಯ್ಯ | ಮುಂಬಡ್ತಿ | ಎಸ್ ಸಿ | 12–11–40 | 12–09–78 | 26–08–93 | 31–10–93 | |
| 112. | ಅನುರಾಧ ಆರ್ | ನೇ ನೇ | – | 16–04–65 | 31–03–97 | 31–03–97 | 31–03–97 | |
| | **ಬ್ಲಾಕ್–XI (01–04–97 ರಿಂದ 25–01–06)** | | | | | | | |
| 113. | ಕೆ.ಬಿ ಗೌಡ | ಮುಂಬಡ್ತಿ | ಎಸ್ ಟಿ | 02–10–48 | 16–07–73 | 26–08–93 | 13–10–93 | |
| 114. | ಆರ್ ಟಿ ಮೇತ್ರಿ | ಮುಂಬಡ್ತಿ | ಎಸ್ ಸಿ | 20–11–45 | 21–07–73 | 18–04–94 | 18–04–94 | |
| 115. | ಸಿ ಟಿ ಶಾಂತರಾಜು | ಮುಂಬಡ್ತಿ | ಎಸ್ ಟಿ | 02–02–45 | 18–04–74 | 31–12–94 | 31–12–94 | |
| 116. | ವಿನ್ಸೆಂಟ್ ಕನ್ಸೆಸ್ಸೋ | ಮುಂಬಡ್ತಿ | – | 10–10–51 | 16–07–73 | 31–12–94 | 31–12–94 | |
| 117. | ರಾಘವೇಂದ್ರ ಕಾಡ್ಲೂರ್ | ಮುಂಬಡ್ತಿ | – | 23–06–50 | 16–07–73 | 07–06–95 | 31–12–94 | |
| 118. | ಎಮ್ ಎಸ್ ತಿಮ್ಮೋಳಿ | ಮುಂಬಡ್ತಿ | – | 04–05–53 | 10–07–73 | 30–08–95 | 30–08–95 | |

| ಕ್ರಮ ಸಂಖ್ಯೆ | ಹೆಸರು ಶ್ರೀಮತಿ / ಶ್ರೀ | ನೇರ ನೇಮಕಾತಿ / ಮುಂಬಡ್ತಿ | ಮೀಸಲಾತಿ ಪ್ರವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಹುದ್ದೆ ಹೊಂದಿದ ದಿನಾಂಕ | ಜೇಷ್ಠತೆಗೆ ನೇಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 119. | ಷಣ್ಮುಗಂ | ಮುಂಬಡ್ತಿ | ಎಸ್ ಸಿ | 10–04–41 | 27–03–62<br>15–02–67 | 15–12–95 | 31–10–97 | |
| 120. | ಯು ಚಂದ್ರಾವತಿ | ಮುಂಬಡ್ತಿ | – | 08–04–43 | 30–05–66 | 15–12–95 | 29–11–97 | |
| 121. | ಎಂ ಎಸ್ ಶಿವಶಂಕರ್ | ಮುಂಬಡ್ತಿ | – | 15–10–41 | 04–05–66 | 15–12–95 | 29–11–97 | |
| 122. | ಜಿ ಎಸ್ ಲಕ್ಷ್ಮಣಮೂರ್ತಿ | ಮುಂಬಡ್ತಿ | – | 16–05–40 | 20–01–61 | 15–12–95 | 29–11–97 | |
| 123. | ಎನ್ ಸಿ ಗಾರ್ಗಿ | ಮುಂಬಡ್ತಿ | – | 25–05–49 | 04–08–78 | 15–12–95 | 29–11–97 | |
| 124. | ಕೆ ಪಿ ಮುಸಿಯಪ್ಪ | ಮುಂಬಡ್ತಿ | – | 10–01–54 | 04–08–78 | 10–12–96 | 29–11–97 | |
| 125. | ಹೆಚ್ ಕೆ ಷಣ್ಮುಖಪ್ಪ | ಮುಂಬಡ್ತಿ | – | 07–05–52 | 04–08–78 | 10–12–96 | 29–11–97 | |
| 126. | ಜಿ ಆರ್ ಇಂಗಳೆ | ಮುಂಬಡ್ತಿ | ಎಸ್ ಸಿ | 01–06–52 | 28–09–81 | 15–12–95 | 29–11–97 | |
| 127. | ಎಂ ಡಿ ಇಂಡಿ | ಮುಂಬಡ್ತಿ | – | 07–03–53 | 04–08–78 | 10–12–96 | 29–11–97 | |
| 128. | ಬಿ ಗೋವಿಂದಪ್ಪ | ಮುಂಬಡ್ತಿ | – | 08–07–51 | 12–09–78 | 10–12–96 | 29–11–97 | |
| 129. | ಜಾನ್ಸನ್ ಕೆ ಜಿ | ನೇ ನೇ | – | 04–05–68 | 04–05–06 | 04–05–06 | 04–05–06 | ಸರ್ಕಾರದ ಆದೇಶದ ಸಂಖ್ಯೆ ಕಾಇ326 ಎಲ್ಇಟಿ 2005(2) ದಿನಾಂಕ:25–01–06 ರಲ್ಲಿ ತಿಳಿಸಿರುವಂತೆ 1998 ರ ಬ್ಯಾಚ್‌ನ ಕಾರ್ಮಿಕ ಅಧಿಕಾರಿಗಳನ್ನು 1999 ರ ಬ್ಯಾಚ್‌ನ ಅಧಿಕಾರಿಗಳಿಗಿಂತ ಜೇಷ್ಠತೆಯಲ್ಲಿ ಮೊದಲು ತೋರಿಸಲಾಗಿದೆ. |
| 130. | ನಾಗೇಶ್ ಡಿ ಜಿ | ನೇ ನೇ | – | 29–06–67 | 09–05–06 | 09–05–06 | 09–05–06 | |
| 131. | ಗುರುಪ್ರಸಾದ್ ಹೆಚ್ ಎಲ್ | ನೇ ನೇ | – | 11–04–76 | 06–05–06 | 06–05–06 | 06–05–06 | |
| 132. | ಶೀಲಾ ಎಮ್ (ಸ್ವಯಂ ನಿವೃತ್ತಿ) | ನೇ ನೇ | – | 20–05–72 | 16–05–06 | 16–05–06 | 16–05–06 | |
| 133. | ರೇವಣ್ಣ ಎಸ್ | ನೇ ನೇ | ಎಸ್ ಟಿ | 01–05–66 | 03–05–06 | 03–05–06 | 03–05–06 | |
| 134. | ಧರಣೇಶ್ | ನೇ ನೇ | ಎಸ್ ಸಿ | 14–07–73 | 04–05–06 | 04–05–06 | 04–05–06 | |
| 135. | ನಾಗರಾಜ್ ಕೆ ಬಿ | ನೇ ನೇ | – | 04–10–68 | 04–05–06 | 04–05–06 | 04–05–06 | |
| | **ಬ್ಲಾಕ್–XII (26–01–06 ರಿಂದ 29–04–06)** | | | | | | | |
| 136. | ಎನ್ ಧನಶೇಗರನ್ | ಮುಂಬಡ್ತಿ | – | 09–07–49 | 25–02–70 | 10–12–96 | 29–11–97 | |

| ಕ್ರಮ ಸಂಖ್ಯೆ | ಹೆಸರು ಶ್ರೀಮತಿ / ಶ್ರೀ | ನೇರ ನೇಮಕಾತಿ / ಮುಂಬಡ್ತಿ | ಮೀಸಲಾತಿ ಪ್ರವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಹುದ್ದೆ ಹೊಂದಿದ ದಿನಾಂಕ | ಜೇಷ್ಠತೆಗೆ ನೇಜವಾದ ಅರ್ಹತಾ ದಿನಾಂಕ | ಷರಾ |
|---|---|---|---|---|---|---|---|---|
| 1 | 2 | 3 | 4 | 5 | 6 | 7 | 8 | 9 |
| 137. | ರವಿಕುಮಾರ್ ಕೆ ಎಲ್ | ನೇ ನೇ | – | 05–07–69 | 30–01–06 | 30–01–06 | 30–01–06 | |
| 138. | ತಮ್ಮಣ್ಣ ಎ ಸಿ | ನೇ ನೇ | – | 20–07–75 | 08–02–06 | 08–02–06 | 08–02–06 | |
| 139. | ಮಹಮದ್ ಜಹೀರ್ ಭಾಷಾ | ನೇ ನೇ | – | 14–02–68 | 08–02–06 | 08–02–06 | 08–02–06 | |
| 140. | ವಿನುತ ಎನ್ | ನೇ ನೇ | – | 23–12–77 | 30–01–06 | 30–01–06 | 30–01–06 | |
| 141. | ಸೋಮಣ್ಣ | ನೇ ನೇ | ಎಸ್ ಸಿ | 25–06–74 | 08–02–06 | 08–02–06 | 08–02–06 | |
| 142. | ಮೀನಾ ಪಾಟೀಲ್ | ನೇ ನೇ | – | 28–01–67 | 06–02–06 | 06–02–06 | 06–02–06 | |
| 143. | ದೇವರಾಜು ಎಮ್ ಎನ್ | ನೇ ನೇ | – | 20–05–71 | 30–01–06 | 30–01–06 | 30–01–06 | |
| 144. | ಮಹಮದ್ ಬಷೀರ್ ಅನ್ಸಾರಿ | ನೇ ನೇ | – | 20–07–71 | 02–02–06 | 02–02–06 | 02–02–06 | |
| 145. | ಆರತಿ | ನೇ ನೇ | ಎಸ್ ಸಿ | 11–01–77 | 02–02–06 | 02–02–06 | 02–02–06 | |
| 146. | ವೀಣಾ ಎಸ್ ಆರ್ | ನೇ ನೇ | ಎಸ್ ಸಿ | 12–02–73 | 30–01–06 | 30–01–06 | 30–01–06 | |
| | **ಬ್ಲಾಕ್– XIII (30–04–06 ರಿಂದ 27–11–06)** | | | | | | | |
| 147. | ಸಂತೋಷ್ ಹಿಪ್ಪರಗಿ | ನೇ ನೇ | – | 20–05–78 | 27–11–06 | 27–11–06 | 27–11–06 | |
| | **ಬ್ಲಾಕ್– XIV (28–11–06 ರಿಂದ ಇಲ್ಲಿಯತನಕ)** | | | | | | | |
| 148. | ಕೃಷ್ಣಪ್ಪ | ಮುಂಬಡ್ತಿ | ಎಸ್ ಸಿ | 08–02–48 | 28–09–81 | 10–12–96 | 29–11–97 | |
| 149. | ಬಿ ಎಸ್ ದಳವಾಯಿ | ಮುಂಬಡ್ತಿ | – | 22–04–41 | 23–02–70 | 10–12–96 | 29–11–97 | |
| 150. | ಚಂದ್ರಕಾಂತ ವಾರದ್ | ಮುಂಬಡ್ತಿ | – | 05–06–45 | 06–01–71 | 10–12–96 | 29–11–97 | |
| 151. | ಎಂ ವಿ ಲಕ್ಷ್ಮಣ್ ಸ್ವಾಮಿ | ಮುಂಬಡ್ತಿ | ಎಸ್ ಸಿ | 01–06–54 | 28–09–81 | 29–07–97 | 01–06–98 | |
| 152. | ಪಿ ವಿಜಯದೇವ್ ನಾಯಕ್ | ಮುಂಬಡ್ತಿ | ಎಸ್ ಟಿ | 08–05–51 | 28–09–81 | 29–07–97 | 11–03–11 | |

ಪಿ.ಆರ್.569

ಕಾರ್ಮಿಕ ಆಯುಕ್ತರು

**ಕರ್ನಾಟಕ ಸರ್ಕಾರ**

**ಕಂದಾಯ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಂಇ 253 ಎಸ್‌ಡಿ 2008, ಬೆಂಗಳೂರು, ದಿನಾಂಕ: 31/05/2011**

ದಿನಾಂಕ 17.02.2010ರ ಅಧಿಸೂಚನೆ ಸಂಖ್ಯೆ ಕಂಇ253ಎಎಸ್‌ಡಿ2008ರನ್ವಯ ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೂಪ್–ಬಿ ವೃಂದದ ಸೇವಾ ಜೇಷ್ಠತೆಯ ತಾತ್ಕಾಲಿಕ ಪಟ್ಟಿಯನ್ನು ದಿನಾಂಕ 25.03.2010ರಂದು ಕರ್ನಾಟಕ ರಾಜ್ಯ ಪತ್ರದ ಪತ್ರಿಕೆಯಲ್ಲಿ ಪ್ರಕಟಿಸಿ ಸಂಬಂಧಿತ ಅಧಿಕಾರಿಗಳಿಂದ ಬಂದಿದ್ದ ಆಕ್ಷೇಪಣೆ ಹಾಗೂ ಸಲಹೆಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು. ಈ ಹಿಂದೆ ತಹಶೀಲ್ದಾರ್ ಗ್ರೂಪ್–ಬಿ ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ 31.12.2001ರವರಗೆ ಇದ್ದಂತೆ ಅಧಿಸೂಚನೆ ಸಂಖ್ಯೆ ಕಂಇ12ಎಎಸ್‌ಜಿ2001 ದಿನಾಂಕ 11.06.2007ರಂದು ಪ್ರಕಟಿಸಲಾಗಿತ್ತು. ಈ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸುವಲ್ಲಿ ಪೋಷಕ ವೃಂದದ (Feeder cadre) ರಾಜ್ಯಮಟ್ಟದ ಅಂತಿಮಗೊಳಿಸಿದ ಶಿರಸ್ತೇದಾರ್ ಜೇಷ್ಠತಾಪಟ್ಟಿಯಲ್ಲಿನ ಸ್ಥಾನಗಳನ್ನು ಆಧರಿಸಲಾಗಿರುತ್ತದೆ. ತಹಶೀಲ್ದಾರ್ ಗ್ರೂಪ್–ಬಿ ವೃಂದದ ತಾತ್ಕಾಲಿಕ ಜೇಷ್ಠತಾ ಪಟ್ಟಿಯಲ್ಲಿನ ಸ್ಥಾನ ಅಥವಾ ಇತರೆ ಅಂಶಗಳಿಂದ ಬಾಧಿತರಾಗುವ ಯಾವುದೇ ವ್ಯಕ್ತಿಯು ತಮ್ಮ ಆಕ್ಷೇಪಣೆಗಳನ್ನು ಪೂರಕ ದಾಖಲಾತಿಗಳೊಂದಿಗೆ ಪ್ರಕಟಿಸಿರುವ ದಿನಾಂಕದಿಂದ 30 ದಿನಗಳೊಳಗಾಗಿ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ ಬಹುಮಹಡಿಗಳ ಕಟ್ಟಡ ಬೆಂಗಳೂರು ಇವರಿಗೆ ಸಲ್ಲಿಸಲು ಸೂಚನೆ ನೀಡಲಾಗಿತ್ತು. ಅದರಂತೆ ಬಾಧಿತ ವ್ಯಕ್ತಿಗಳು ತಮ್ಮ ಆಕ್ಷೇಪಣೆಗಳನ್ನು ಸಲ್ಲಿಸಿರುತ್ತಾರೆ. ಸದರಿ ಆಕ್ಷೇಪಣೆಗಳಲ್ಲಿ ಅರ್ಹರಿರುವ ಆಕ್ಷೇಪಣೆಗಳನ್ನು ಪರಿಗಣಿಸಿ ಸರಿಪಡಿಸಲಾಗಿದೆ. ಸರಿಪಡಿಸಿರುವ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ 31.12.2008ರವರಗೆ ಇದ್ದಂತೆ ಇದರೊಂದಿಗೆ ಲಗತ್ತಿಸಿದಂತೆ ಪ್ರಕಟಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಸೇವೆಗಳು–3).

**ವಿವರಣಾ ಪಟ್ಟಿ**

ಕಂದಾಯ ಇಲಾಖೆಯ ತಹಶೀಲ್ದಾರ್ ಗ್ರೇಡ್–2 ವೃಂದದ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡ ಅಂಶಗಳನ್ನು ಆಧರಿಸಿ ಪ್ರಕಟಿಸಲಾಗಿದೆ.

1. ಕಂದಾಯ ಇಲಾಖೆಯ ಗ್ರೂಪ್–ಬಿ ತಹಶೀಲ್ದಾರ್ ವೃಂದದ ಸೇವಾ ಜೇಷ್ಠತೆಯ ತಾತ್ಕಾಲಿಕ ಪಟ್ಟಿಯನ್ನು ಅಧಿಸೂಚನೆ ಸಂಖ್ಯೆ ಕಂಇ253ಎಎಸ್‌ಡಿ2008 ದಿನಾಂಕ 17.02.2010ರಂದು ಕರ್ನಾಟಕ ರಾಜ್ಯ ಪತ್ರದ ಪತ್ರಿಕೆಯಲ್ಲಿ ದಿನಾಂಕ 25.03.2010ರಂದು ಪ್ರಕಟಿಸಿ ತಾತ್ಕಾಲಿಕ ಪಟ್ಟಿಯನ್ನು ಕುರಿತಂತೆ ಸಂಬಂಧಿಸಿದ ಅಧಿಕಾರಿಗಳಿಂದ ಯಾವುದೇ ಆಕ್ಷೇಪಣೆಗಳಿದ್ದಲ್ಲಿ 30 ದಿನಗಳೊಳಗಾಗಿ ಪ್ರಧಾನ ಕಾರ್ಯದರ್ಶಿಗಳು ಕಂದಾಯ ಇಲಾಖೆ ಇವರಿಗೆ ಸಲ್ಲಿಸಲು ಸೂಚಿಸಲಾಗಿತ್ತು.
2. ನಿಗಧಿತ ಕಾಲಾವಧಿಯೊಳಗೆ ಸ್ವೀಕೃತವಾಗಿರುವ ಆಕ್ಷೇಪಣೆಗಳಲ್ಲಿ ಅರ್ಹರಿರುವ ಆಕ್ಷೇಪಣೆಗಳನ್ನು ನಿಯಮಾನುಸಾರ ಪರಿಶೀಲಿಸಿ ಸರಿಪಡಿಸಲು ಕ್ರಮ ಕೈಗೊಳ್ಳಲಾಗಿದೆ.
3. ದಿನಾಂಕ 01.11.1956 ರಿಂದ 31.12.2008ರವರಗೆ ಲಭ್ಯವಾಗಿರುವ ವರ್ಗೀಕೃತ ಖಾಲಿ ಹುದ್ದೆಗಳ ವಿವರಗಳನ್ನು ಅನುಬಂಧ–1 ರಲ್ಲಿ ತೋರಿಸಲಾಗಿದೆ.
4. ದಿನಾಂಕ 01.11.1956 ರಿಂದ 31.12.2008ರವರಗೆ ತಹಶೀಲ್ದಾರ್ ಗುಂಪು–ಬಿ ವೃಂದದಲ್ಲಿ ಅರ್ಹತಾ ದಿನಾಂಕವನ್ನು ಪಡೆದಿರುವ ಅಧಿಕಾರಿಗಳ ಹೆಸರುಗಳನ್ನು ಅನುಬಂಧ–2 ರಲ್ಲಿ ತೋರಿಸಲಾಗಿದೆ.
5. ದಿನಾಂಕ:11–06–2007 ರಂದು ಪ್ರಕಟಿಸಿದ ತಹಶೀಲ್ದಾರರುಗಳ ಅಂತಿಮ ಜೇಷ್ಠತಾ ಪಟ್ಟಿಯ ಅನುಬಂಧ–1 ರಲ್ಲಿ ದಿನಾಂಕ:01–11–1956 ರಿಂದ 31–12–2001 ರವರೆಗೆ ಒಟ್ಟು 35 ಬ್ಲಾಕುಗಳನ್ನು ರಚಿಸಲಾಗಿದೆ. ಈ ಬ್ಲಾಕ್‌ಗಳಲ್ಲಿ ಬ್ಲಾಕ್ ನಂ.1 ರಿಂದ ಬ್ಲಾಕ್ ನಂ.29 ರವರೆಗೆ ಸರ್ಕಾರದ ಮಾರ್ಗಸೂಚಿಗಳನ್ವಯ ತಯಾರಿಸಲಾಗಿದ್ದು, ಬ್ಲಾಕ್ ನಂ.30 ರಿಂದ ಅಂದರೆ ದಿನಾಂಕ:14–09–1993 ರಿಂದ 31–12–2001ರವರೆಗೆ ಪ್ರತಿ ವರ್ಷಕ್ಕೊಂದರಂತೆ ವರ್ಷವಾರು ಬ್ಲಾಕ್ ಗಳಾಗಿ ರಚಿಸಿದ್ದು ಇರುತ್ತದೆ. ದಿನಾಂಕ:14–09–1993 ರಿಂದ 31–12–2001 ರವರೆಗೆ ತಹಶೀಲ್ದಾರ್ ಗ್ರೇಡ್–2 ರ ವೃಂದಕ್ಕೆ ಲೋಕಸೇವಾ ಆಯೋಗದ ಮೂಲಕ ಯಾವುದೇ ತರಹದ ನೇರನೇಮಕಾತಿ ಆಗದೇ ಇರುವುದರಿಂದ ಪ್ರತಿ ಕ್ಯಾಲೆಂಡರ್ ವರ್ಷಕ್ಕೆ ಬ್ಲಾಕ್‌ಗಳನ್ನು ರಚಿಸಿ ರಿಕ್ತ ಸ್ಥಾನಗಳನ್ನು ವಿಂಗಡಿಸಿರುವುದು ಕಂಡುಬರುತ್ತದೆ. ಆದ್ದರಿಂದ ಈ ಹಂತದಲ್ಲಿ ತಹಶೀಲ್ದಾರರ ವೃಂದದ ಜೇಷ್ಟತಾ ಯಾದಿಯನ್ನು ದಿನಾಂಕ:31–12–2008 ರವರೆಗೆ ಇದ್ದಂತೆ ತಯಾರಿಸಲಾಗುತ್ತಿರುವುದರಿಂದ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ:ಡಿಪಿಎಆರ್ 48 ಎಸ್‌ಎಸ್‌ಆರ್ 75, ದಿನಾಂಕ:05–07–1976 ರಲ್ಲಿ ಹೇಳಿರುವಂತೆ ಬ್ಲಾಕ್ ಅವಧಿಯನ್ನು ಒಂದು ನೇರನೇಮಕಾತಿ ದಿನಾಂಕದಿಂದ ಇನ್ನೊಂದು ನೇರನೇಮಕಾತಿ ದಿನಾಂಕದವರೆಗೆ ಅಥವಾ ಮಧ್ಯದ ಅವಧಿಯಲ್ಲಿ ನೇಮಕಾತಿ ನಿಯಮಗಳಿಗೆ ತಿದ್ದುಪಡಿ ಮಾಡಿದ್ದಲ್ಲಿ ತಿದ್ದುಪಡಿ ಮಾಡಿದ ದಿನಾಂಕದಿಂದ ಬ್ಲಾಕ್‌ಗಳನ್ನು ರಚಿಸಬೇಕಾಗುತ್ತದೆ.
6. ಆದ್ದರಿಂದ ಪ್ರಸ್ತುತ ತಯಾರಿಸಲಾಗುತ್ತಿರುವ ತಹಶೀಲ್ದಾರ್ ಗ್ರೇಡ್–2 ವೃಂದದ ಜೇಷ್ಟತಾ ಯಾದಿಯನ್ನು 2006, 2008 ರಲ್ಲಿ ಮಾಡಲಾಗಿರುವ ನೇರನೇಮಕಾತಿ ಹಿನ್ನೆಲೆಯಲ್ಲಿ ಬ್ಲಾಕನ್ನು ಪುನ: ಪರಿಷ್ಕರಿಸಬೇಕಾಗಿರುತ್ತದೆ. ಕಾರಣ ಬ್ಲಾಕ್ ನಂ.29ರ ನಂತರ ಅಂದರೆ, ದಿನಾಂಕ: 13–09–1993 ರ ನಂತರ, ದಿನಾಂಕ:14–09–1993 ರಿಂದ 31–12–2008 ರವರೆಗೆ ಈ ಕೆಳಗಿನಂತೆ ರಚಿಸಲಾಗಿದೆ.

| | | |
|---|---|---|
| ಬ್ಲಾಕ್ ನಂ. 29 | ದಿ:01–08–1992 ರಿಂದ 13–09–1993 | |
| ಬ್ಲಾಕ್ ನಂ. 30 | ದಿ:14–09–1993 ರಿಂದ 24–01–2006 | ದಿ:25–01–2006 ಕ್ಕೆ ನೇರನೇಮಕಾತಿ ಮೂಲಕ 78 ತಹಶೀಲ್ದಾರರನ್ನು ನೇಮಕ ಮಾಡಲಾಗಿದೆ. ಆದ್ದರಿಂದ ಈ ಬ್ಲಾಕನ್ನು ದಿ: 24–01–2006 ಕ್ಕೆ ಮುಕ್ತಾಯಗೊಳಿಸಲಾಗಿದೆ. |
| ಬ್ಲಾಕ್ ನಂ.31 | ದಿ:25–01–2006 ರಿಂದ 14–04–2006 | ದಿ:15–04–2006 ಕ್ಕೆ ನೇರನೇಮಕಾತಿ ಮೂಲಕ 50 ತಹಶೀಲ್ದಾರರನ್ನು ನೇಮಕ ಮಾಡಲಾಗಿದೆ. ಆದ್ದರಿಂದ ಈ ಬ್ಲಾಕನ್ನು ದಿ: 14–04–2006 ಕ್ಕೆ ಮುಕ್ತಾಯಗೊಳಿಸಲಾಗಿದೆ. |
| ಬ್ಲಾಕ್ ನಂ.32 | ದಿ:15–04–2006 ರಿಂದ 21–06–2006 | ದಿ:22–06–2006 ಕ್ಕೆ ನೇರನೇಮಕಾತಿ ಮೂಲಕ 40 ತಹಶೀಲ್ದಾರರನ್ನು ನೇಮಕ ಮಾಡಲಾಗಿದೆ. ಆದ್ದರಿಂದ ಈ ಬ್ಲಾಕನ್ನು ದಿ: 21–06–2006 ಕ್ಕೆ ಮುಕ್ತಾಯಗೊಳಿಸಲಾಗಿದೆ. |
| ಬ್ಲಾಕ್ ನಂ.33 | ದಿ:22–06–2006 ರಿಂದ 22–05–2008 | ದಿ:23–05–2008 ಕ್ಕೆ ನೇರನೇಮಕಾತಿ ಮೂಲಕ 40 ತಹಶೀಲ್ದಾರರನ್ನು ನೇಮಕ ಮಾಡಲಾಗಿದೆ. ಆದ್ದರಿಂದ ಈ ಬ್ಲಾಕನ್ನು ದಿ: 22–05–2008 ಕ್ಕೆ ಮುಕ್ತಾಯಗೊಳಿಸಲಾಗಿದೆ. |
| ಬ್ಲಾಕ್ ನಂ.34 | ದಿ:23–05–2008 ರಿಂದ 31–12–2008 | |

7. ದಿನಾಂಕ 31.12.2008ರವರಗೆ ಕೋಟಾದಲ್ಲಿ ಅರ್ಹತಾ ದಿನಾಂಕ ಲಭ್ಯವಾಗದೆ ಇರುವ ಮತ್ತು ಕರ್ನಾಟಕ ನಾಗರೀಕ ಸೇವಾ ನಿಯಮ 32ರಡಿಯಲ್ಲಿ ನೇರ ನೇಮಕಾತಿ ಕೋಟಾದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಥವಾ ಕೋಟಾ ಮೀರಿ ಮುಂದುವರೆಯುತ್ತಿರುವ ಹೆಚ್ಚುವರಿ ಅಧಿಕಾರಿಗಳ ಹೆಸರುಗಳನ್ನು ಅನುಬಂಧ (3)ರಲ್ಲಿ ತೋರಿಸಲಾಗಿದೆ. ಮುಂಬಡ್ತಿ ಕೋಟಾ ಮೀರಿ ಮುಂದುವರೆಯುತ್ತಿರುವ ಈ ಅಧಿಕಾರಿಗಳ ಸೇವಾವಧಿಯನ್ನು ಜೇಷ್ಠತೆಯ ಉದ್ದೇಶಕ್ಕೆ ಪರಿಗಣಿಸಲಾಗದು. ಆದರೆ ಅವರುಗಳ ಸೇವೆಯನ್ನು ಅವರುಗಳಿಗೆ ಮುಂಬಡ್ತಿ ಕೋಟಾದಲ್ಲಿ ರಿಕ್ತ ಸ್ಥಾನಗಳು ಲಭ್ಯವಾಗುವ ದಿನಾಂಕದಿಂದ ಪರಿಗಣಿಸಲಾಗುವುದು. ಈ ಬಗೆಗಿನ ಉಲ್ಲೇಖ (1996) 11 SCC 361 ರಲ್ಲಿ ವರದಿಯಾದ ಎ.ಎಸ್.ಪಾಟೀಲ್ ವಿರುದ್ಧ ಮಹಾರಾಷ್ಟ್ರ ರಾಜ್ಯ ಸರ್ಕಾರ ಸಂಬಂಧ ಸರ್ವೋಚ್ಛ ನ್ಯಾಯಾಲಯವು ನೀಡಿದ ತೀರ್ಪು.

8. ಅಂತಿಮ ಜೇಷ್ಠತೆ ಪಟ್ಟಿಯನ್ನು ವಿ.ಬಿ.ಬಾದಾಮಿ ವಿರುದ್ಧ ರಾಜ್ಯ ಸರ್ಕಾರ ಮತ್ತು ಗೋನಾಳ್ ಭೀಮಪ್ಪ ವಿರುದ್ಧ ರಾಜ್ಯ ಸರ್ಕಾರ ಪ್ರಕರಣಗಳಲ್ಲಿ ಸರ್ವೋಚ್ಛ ನ್ಯಾಯಾಲಯವು ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಸರ್ಕಾರವು ಹೊರಡಿಸಿದ ದಿನಾಂಕ 05.07.1976 ಸಂಖ್ಯೆ ಡಿ.ಪಿ.ಎ.ಆರ್. 48 ಎಸ್.ಎಸ್.ಆರ್. 1975 ಮತ್ತು ದಿನಾಂಕ 14.12.1987 ಸಂಖ್ಯೆ ಸಿಆಸುಇ 43ಸೇಸನಿ1987ರ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಗಳನ್ವಯ ಜೇಷ್ಠತಾ ಪಟ್ಟಿಯನ್ನು ತಯಾರಿಸಲಾಗಿದೆ.

9. ಸಂಬಂಧಿತ ಬ್ಲಾಕ್ ಅವಧಿಯಲ್ಲಿ ಕೋಟಾ ಮೀರಿ ತುಂಬಿದ ಅಧಿಕಾರಿಗಳ ಜೇಷ್ಠತೆಯನ್ನು ತರುವಾಯದ ಬ್ಲಾಕ್‌ನಲ್ಲಿ ಅವರಿಗೆ ಸಂಬಂಧಿಸಿದ ಮುಂಬಡ್ತಿ ರಿಕ್ತ ಸ್ಥಾನಗಳ ಕೋಟಾದಲ್ಲಿ ಜೇಷ್ಠತೆಯನ್ನು ನಿಗಧಿಪಡಿಸಲಾರುತ್ತದೆ. (ಅನುಬಂಧ (1) ರಲ್ಲಿ ತೋರಿಸಲಾಗಿದೆ.)

10. ನೇರ ನೇಮಕಾತಿದಾರರು (DR) ತಾನು ನೇಮಕಾತಿ ಹೊಂದಿದ ದಿನಾಂಕಕ್ಕಿಂತ ಮುಂಚಿತವಾಗಿ ಅರ್ಹತಾ ದಿನಾಂಕವನ್ನು ಅಥವಾ ರಿಕ್ತ ಸ್ಥಾನ ಉದ್ಭವಿಸಿದ ದಿನಾಂಕದಿಂದ ಜೇಷ್ಠತೆಯನ್ನು ಪಡೆಯುವಂತಿಲ್ಲ ಈ ಬಗ್ಗೆ (1977) 1 SCC 308 ರಲ್ಲಿ ವರದಿಯಾದ ಎನ್.ಕೆ. ಚವ್ಹಾಣ್ ವಿರುದ್ಧ ಗುಜರಾತ್ ರಾಜ್ಯ ಸರ್ಕಾರ ಮತ್ತು (1983) 3 SCC 601 ರಲ್ಲಿ ವರದಿಯಾದ ಎ.ಜನಾರ್ಧನ್ ವಿರುದ್ಧ ಭಾರತ ಸರ್ಕಾರ ಮತ್ತು 2007 1 SCC 683 ರಲ್ಲಿ ವರದಿಯಾದ ಉತ್ತರಾಂಚಲ ರಾಜ್ಯ ಸರ್ಕಾರ ಮತ್ತೊಬ್ಬರ ವಿರುದ್ಧ ದಿನೇಶ್ ಕುಮಾರ್ ಶರ್ಮ ಸೂರಜ್ ಪ್ರಕಾಶ್ ಗುಪ್ತ ಮತ್ತಿತರರು ವಿರುದ್ಧ ಜಮ್ಮು ಮತ್ತು ಕಾಶ್ಮೀರ ರಾಜ್ಯ ಸರ್ಕಾರ (2000) 7 SCC 561 (ಪುಟ 599) ಈ ಪ್ರಕರಣಗಳಲ್ಲಿ ಸರ್ವೋಚ್ಛ ನ್ಯಾಯಾಲಯವು ನೀಡಿರುವ ತೀರ್ಪು ಆಧಾರವಾಗಿದೆ.

11. ಮುಂಬಡ್ತಿ ಪಡೆದವರಿಗೆ ಅರ್ಹತಾ ದಿನಾಂಕವನ್ನು ರಿಕ್ತ ಸ್ಥಾನ ಉಪಯೋಗಿಸಿದ ಅಥವಾ ಮುಂಬಡ್ತಿ ಕೋಟದಲ್ಲಿ ಲಭ್ಯವಾಗುವ ರಿಕ್ತ ಸ್ಥಾನಕ್ಕೆ ಅನುಗುಣವಾಗಿ ತೋರಿಸಿದೆ ಈ ಬಗೆಗಿನ ಉಲ್ಲೇಖ AIR 1991 SC 284 (ಕೇಶವಚಂದ್ರ ಜೋಷಿ ಮತ್ತಿತರರು ವಿರುದ್ಧ ಭಾರತ ಸರ್ಕಾರ) AIR 1991 SC 1406 (ಎ.ಎನ್.ಸೆಹಗಲ್ ಮತ್ತಿತರರ ವಿರುದ್ಧ ರಾಜಾರಾಂ ಶೆರೋಮ್ ಮತ್ತಿತರರು.) AIR 2000 SC 2386 ಸೂರಜ್ ಪ್ರಕಾಶ್ ಗುಪ್ತ ಮತ್ತಿತರರ ವಿರುದ್ಧ ಜಮ್ಮು ಮತ್ತು ಕಾಶ್ಮೀರ ರಾಜ್ಯ ಸರ್ಕಾರ ಮತ್ತಿತರರು.

12. ನೇರ ನೇಮಕಾತಿ ಹೊಂದಿದ ಅಭ್ಯರ್ಥಿಗಳು ನಿಯಮಾನುಸಾರ ಅನುಮತಿಸಿದ ಅವಧಿಯೊಳಗೆ ಕರ್ತವ್ಯಕ್ಕೆ ಹಾಜರಾದಲ್ಲಿ ಅಂತಹವರ ಜೇಷ್ಠತೆಯನ್ನು 1957ರ ಜೇಷ್ಠತಾ ನಿಯಮಗಳ ಪ್ರಕಾರ ಆಯ್ಕೆ ಪಟ್ಟಿಯಂತೆ ನಿಗದಿಗೊಳಿಸಲಾಗಿದೆ. ಒಂದು ವೇಳೆ ನೇರ ನೇಮಕಾತಿ ಪಡೆದ ಅಭ್ಯರ್ಥಿಯು ಅನುಮತಿಸಿದ ಅವಧಿಯನ್ನು ಮೀರಿ ಹೆಚ್ಚಿನ ಕಾಲಾವಕಾಶ ಪಡೆದು ಕರ್ತವ್ಯಕ್ಕೆ ಹಾಜರಾದಲ್ಲಿ ಅಂತಹವರ ಜೇಷ್ಟತೆಯನ್ನು ಕರ್ತವ್ಯಕ್ಕೆ ಹಾಜರಾದ ದಿನಾಂಕದಿಂದ ಪರಿಗಣಿಸಲಾಗುವುದು.

13. ಅಂತಿಮವಾದ ಈ ಜೇಷ್ಠತಾ ಪಟ್ಟಿಯಲ್ಲಿ ನೇರ ನೇಮಕಾತಿ ಪ್ರವರ್ಗದವರ ನೇಮಕಾತಿಯ ಕೋಟವನ್ನು ಮೀರಿಲ್ಲ ಮತ್ತು ಅವರುಗಳನ್ನು ನೇರ ನೇಮಕಾತಿ ಕೋಟಾದಲ್ಲಿ ಹೊಂದಾಣಿಕೆ ಮಾಡಲಾಗಿದೆ. ಉಳಿದಂತೆ ಮುಂಬಡ್ತಿ ಪ್ರವರ್ಗದವರ ವಿಷಯದಲ್ಲಿ ಕೋಟಾವನ್ನು ಮೀರಿದಂತಹವರನ್ನು ಮತ್ತು ಅರ್ಹತಾ ದಿನಾಂಕ ಪಡೆಯದಿರುವವರನ್ನು ಹೆಚ್ಚುವರಿಯಾಗಿ ತೋರಿಸಲಾಗಿದೆ. ಕೋಟಾ ಮೀರಿ ಮುಂಬಡ್ತಿ

ಪಡೆದ ವ್ಯಕ್ತಿಯ ಮುಂಬಡ್ತಿಯು ಅಡ್‌ಹಾಕ್ ಬಡ್ತಿಯಾಗಿದ್ದು. ಅಡ್‌ಹಾಕ್ ಬಡ್ತಿ ಆಧಾರದ ಸೇವೆಯನ್ನು ಜೇಷ್ಠತೆಗೆ ಪರಿಗಣಿಸಲಾಗದು. ಈ ಬಗೆಗಿನ ಉಲ್ಲೇಖ 1992 SUPP (1) SC 272 (ಕೇಶವಚಂದ್ರ ಜೋಷಿ ವಿರುದ್ದ ಭಾರತ ಸರ್ಕಾರ) ಮತ್ತು (1996) SC 361 (ಎಂ.ಎಸ್.ಪಾಟೀಲ್ ವಿರುದ್ದ ಮಹಾರಾಷ್ಟ್ರ ಸರ್ಕಾರ).

14. ಪೂರ್ವಾನ್ವಯವಾಗಿ ಬಡ್ತಿಗಳನ್ನು ನೀಡಬೇಕೆನ್ನುವ ಕೆಲವು ಅಧಿಕಾರಿಗಳ / ನಿವೃತ್ತ ಅಧಿಕಾರಿಗಳ ಆಕ್ಷೇಪಣೆಗಳನ್ನು ಪರಿಗಣಿಸಲಾಗಿ, ಅಧಿಸೂಚನೆ ಸಂಖ್ಯೆ: ಆರ್‌ಡಿ 12 ಎಎಸ್‌ಜಿ 2001, ದಿನಾಂಕ: 11–06–2007 ರಂದು ಇದ್ದಂತೆ ಪ್ರಕಟಿಸಿದ ಜೇಷ್ಠತಾ ಪಟ್ಟಿಯ ಬಗ್ಗೆ ನ್ಯಾಯಾಲಯದಲ್ಲಿ ಯಾವುದೇ ಕೇಸುಗಳನ್ನು ದಾಖಲಿಸಿ ತಡೆಯಾಜ್ಞೆ / ನಿರ್ದೇಶನ / ಆದೇಶ ವಗ್ಯೆರೆ ಬಂದಿರುವುದಿಲ್ಲ. ಈ ಹಿನ್ನೆಲೆಯಲ್ಲಿ ದಿನಾಂಕ:31–12–2008 ರವರೆಗೆ ಇದ್ದಂತೆ ಅಂತಿಮಗೊಳಿಸಿ ಪ್ರಕಟಿಸಿದ ಈ ಜೇಷ್ಠತಾ ಪಟ್ಟಿಯಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ನಿಯಂತ್ರಣ) ನಿಯಮ 1978 ರನ್ವಯ ಪೂರ್ವಾನ್ವಯ ಬಡ್ತಿ ನೀಡಲಾಗಲೀ ಅಥವಾ ವೇತನ ಬಾಕಿಯನ್ನು ನೀಡಲಾಗಲೀ ಆಸ್ಪದವಿರುವುದಿಲ್ಲ. ಅದೇ ರೀತಿ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಬಡ್ತಿ, ವೇತನ ಮತ್ತು ನಿವೃತ್ತಿ ವೇತನ ನಿಯಂತ್ರಣ) ಕಾಯ್ದೆ 1973 ರನ್ವಯ ಅರ್ಹತಾ ದಿನಾಂಕಗಳನ್ನು ನೀಡಬಹುದಾಗಿದೆಯೇ ಹೊರತು ಅದೇ ಕಾಯ್ದೆಯ ಸೆಕ್ಷನ್ 4(2) ಪ್ರಕಾರ ಯಾವುದೇ ವೇತನ ಬಾಕಿಯನ್ನು ನೀಡಲು ಅವಕಾಶವಿರುವುದಿಲ್ಲ. ಮುಂದುವರೆದು, 2007 AIR SCW 7023 ರಲ್ಲಿ ವರದಿಯಾದ ಭಾರತ ಸರ್ಕಾರ ವಿರುದ್ದ ಬಿ.ಎಂ.ಜಾ ಮತ್ತು (2009 1 SCC (L&S) 671 ರಲ್ಲಿ ವರದಿಯಾದ ನಿರ್ಮಲಾ ಚಂದ್ರ ಸಿನ್ಹ ವಿರುದ್ದ ಭಾರತ ಸರ್ಕಾರ ಈ ಪ್ರಕರಣಗಳಲ್ಲಿ ಕ್ರಮವಾಗಿ ಸರ್ವೋಚ್ಚ ನ್ಯಾಯಾಲಯವು ಪೂರ್ವಾನ್ವಯವಾಗಿ ಮುಂಬಡ್ತಿ ಪಡೆದವರು NO WORK NO PAY ಆಧಾರದ ಮೇಲೆ ವೇತನ ಬಾಕಿಗೆ ಅರ್ಹರಿಲ್ಲವೆಂದು ನಿರ್ಣಯಿಸಿದೆ. ಮತ್ತು ಮುಂಬಡ್ತಿಯ ಪರಿಣಾಮಿ ದಿನಾಂಕವನ್ನು (Effective Date) ಮುಂಬಡ್ತಿ ರಿಕ್ತ ಸ್ಥಾನ ಉದ್ಭವಿಸಿದ ಅಥವಾ ಹುದ್ದೆಯನ್ನು ಸೃಜಿಸಿದ ದಿನಾಂಕದಿಂದ ಪರಿಗಣಿಸಲಾಗದು. ಬದಲಿಗೆ ಅದು ನಿಯತವಾಗಿ (Regular) ಮುಂಬಡ್ತಿ ನೀಡಿದ ದಿನಾಂಕದಿಂದ ಪರಿಣಾಮಕ್ಕೆ ಬರುತ್ತದೆ. ಆದುದರಿಂದ ಈ ಹಿನ್ನೆಲೆಯಲ್ಲಿ ಪೂರ್ವಾನ್ವಯವಾಗಿ ಪರಿಭಾವಿತ ಮುಂಬಡ್ತಿಯನ್ನಾಗಲೀ (Deemed Promotion) ಅಥವಾ ಇತರೆ ತತ್ಪರಿಣಾಮವಾದ ಸೌಲಭ್ಯಗಳನ್ನು ನೀಡಲು ಅವಕಾಶವಿರುವುದಿಲ್ಲ. ಈ ಬಗ್ಗೆ Union of India Vs K.K.Vadera (1989 SUPP(2) SCC 625) State of Uttaranchal Vs Dinesh Kumar Sharma (2007 1 SCC 683), K.V.Subbarao Vs Govt.of A.P. (1988 2 SCC 201) ಮತ್ತು Sanjay K.Sinha-II Vs State of Bihar (2004) 10 SCC 374 ಈ ಪ್ರಕರಣಗಳಲ್ಲಿ ಸರ್ವೋಚ್ಚ ನ್ಯಾಯಾಲಯವು ನೀಡಿರುವ ನಿರ್ಣಯಗಳು ಉಲ್ಲೇಖಾರ್ಹವಾಗಿವೆ.

15. ಮೊದಲಿಗೆ ಕೆಸಿಎಸ್‌ಆರ್ ನಿಯಮ 32 ರ ಪ್ರಕಾರ ಸ್ವತಂತ್ರ ಪ್ರಭಾರದಲ್ಲಿ ಇರಿಸಲ್ಪಟ್ಟು ಮುಂದುವರೆದ ನೇಮಕಾತಿಗಳು ನಿಯತವಾದ (Regular) ಮುಂಬಡ್ತಿಗಳಲ್ಲ. ಹೆಚ್ಚೆಂದರೆ ಅಂತಹ ನೇಮಕಾತಿಗಳು ತಾತ್ಕಾಲಿಕ ನೇಮಕಾತಿಗಳಾಗಿರುತ್ತವೆ. ಈ ಬಗ್ಗೆ 2010 ಕೆಎಸ್‌ಎಲ್‌ಜೆ 1 ರಲ್ಲಿ ವರದಿಯಾದ ರವಿಕಾಂತೇಗೌಡ ಮತ್ತಿತರರು ವಿರುದ್ದ ಕರ್ನಾಟಕ ರಾಜ್ಯ ಸರ್ಕಾರ (ಅರ್ಜಿ ಸಂಖ್ಯೆ: 149/2008 ಮತ್ತು ಇದಕ್ಕೆ ಜೊತೆ ಮಾಡಿದ ಇತರೆ ಪ್ರಕರಣಗಳು) ಪ್ರಕರಣದ ಬಗ್ಗೆ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ನಿರ್ಣಯಿಸಿದಂತೆ ಕೆಸಿಎಸ್‌ಆರ್ ನ ನಿಯಮ 32 ರಂತೆ ಮಾಡಿದ ನೇಮಕಾತಿಯಲ್ಲಿ ಸಲ್ಲಿಸಿದ ಸೇವೆಯನ್ನು ಜೇಷ್ಠತೆಗೆ ಪರಿಗಣಿಸಲಾಗದು. ಈ ಬಗೆಗಿನ ಉಲ್ಲೇಖ (1996) 11 SCC M.S.Patil Vs State of Maharastra.

16. ಅಂತಿಮವಾಗಿ 1998, 1999 ರ ತಂಡದ ನೇರನೇಮಕಾತಿ ತಹಶೀಲ್ದಾರ್‌ರವರುಗಳ ಪೈಕಿ 1999 ರ ತಂಡದ ತಹಶೀಲ್ದಾರ್‌ರವರುಗಳು ತಹಶೀಲ್ದಾರ್ ಹುದ್ದೆಗೆ ಕಾರ್ಯವರದಿ ಮಾಡಿಕೊಂಡ ದಿನಾಂಕವನ್ನು ಪರಿಗಣಿಸಿ ಅವರುಗಳ ಪರಸ್ಪರ (Inter-Se) ಜೇಷ್ಠತೆಯನ್ನು ನಿಗಧಿಪಡಿಸುವಂತೆ ಆಕ್ಷೇಪಣೆ ಸಲ್ಲಿಸಿರುತ್ತಾರೆ. ಆದರೆ ಈ ಬಗ್ಗೆ ಕರ್ನಾಟಕ ಉಚ್ಚ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ: 10605–10620/2010 ಮತ್ತು ಇದಕ್ಕೆ ಜೊತೆಮಾಡಿದ ರಿಟ್ ಅರ್ಜಿಗಳ ಕುರಿತು ದಿ:08–12–2010 ರಂದು ನೀಡಿದ ತೀರ್ಪಿನಲ್ಲಿ ನಿರ್ಣಯಿಸಿದ ಅಂಶಗಳ ಹಿನ್ನೆಲೆಯಲ್ಲಿ 1998 ರ ನೇರ ನೇಮಕಾತಿ ತಹಶೀಲ್ದಾರ್ ತಂಡವು ಜೇಷ್ಠತೆಯಲ್ಲಿ ವರಿಷ್ಠರೆಂದು ಪರಿಗಣಿಸಿರುವುದರಿಂದ ಅದರಂತೆ 1998ರ ತಹಶೀಲ್ದಾರ್ ತಂಡದ ಜೇಷ್ಠತೆಯನ್ನು ನಿಗದಿಪಡಿಸಲಾಗಿದೆ.

17. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರನ್ನು ಮುಂಬಡ್ತಿಗಾಗಿ ರೋಸ್ಟರ್ ಬಿಂದುಗಳ ಪ್ರಕಾರ ಅವರುಗಳನ್ನು ಮುಂಬಡ್ತಿಗೆ ಪರಿಗಣಿಸಿದ್ದರೂ ಆದರೆ ಜೇಷ್ಠತೆ ಉದ್ದೇಶಕ್ಕಾಗಿ ಸಿಆಸುಇಲಾಖೆ ಹೊರಡಿಸಿದ ಅಧಿಕೃತ ಜ್ಞಾಪನ ಸಂಖ್ಯೆ:ಡಿಪಿಎಆರ್ 29 ಎಸ್‌ಬಿಸಿ 77, ದಿನಾಂಕ:1–6–78 ರಲ್ಲಿನ ಸೂಚನೆಗಳಂತೆ ಜೇಷ್ಠತೆ ಸ್ಥಾನವನ್ನು ನಿಗದಿಪಡಿಸಿದೆ.

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3).

**ಬ್ಲಾಕ್ ನಂ. 30 ರಿಂದ 34 ರವರೆಗೆ ಮುಂಬಡ್ತಿ ವರ್ಗದವರಿಗೆ ಲಭ್ಯವಾದ ರಿಕ್ತ ಸ್ಥಾನಗಳಿಗೆ ಮುಂಬಡ್ತಿ ನೀಡಿದ ವಿವರಗಳು**

ಅಂತಿಮಗೊಳಿಸುತ್ತಿರುವ ಜೇಷ್ಠತಾ ಪಟ್ಟಿಯಲ್ಲಿ ಜೇಷ್ಠತೆ ನಿಗದಿಪಡಿಸುವುದನ್ನು ಬ್ಲಾಕ್ 30 ರಿಂದ ಪ್ರಾರಂಭಿಸಿ ಅಂತಿಮವಾಗಿ ಬ್ಲಾಕ್ ನಂ.34 ಕ್ಕೆ ಕೊನೆಗೊಳಿಸಿದೆ. ಬ್ಲಾಕ್ ನಂ. 30 ರಿಂದ 34 ರವರೆಗೆ ಎಲ್ಲಾ ಅವಧಿಗಳಲ್ಲಿ ನೇರ ನೇಮಕಾತಿ ಹುದ್ದೆಗಳು ಯಾವಾಗಲೂ ಸಾಕಷ್ಟು ಲಭ್ಯವಿದ್ದಿದ್ದರಿಂದ ಆಯಾ ಅವಧಿಯಲ್ಲಿ ನೇರ ನೇಮಕಾತಿ ಮೂಲಕ ಬಂದಂತಹ ಅಭ್ಯರ್ಥಿಗಳನ್ನು ಅವರುಗಳ Slot ನಲ್ಲಿ ಸ್ಥಾನ ಕಲ್ಪಿಸಿದೆ. ಆದರೆ ಸಮಸ್ಯೆ ಇರುವುದು

ಮುಂಬಡ್ತಿ ವರ್ಗದವರಿಗೆ ಮಾತ್ರ. ಅದು ಹೇಗೆಂದರೆ ಮುಂಬಡ್ತಿ ವರ್ಗದವರ ಪಾಲಿನ ಬಡ್ತಿ ಹುದ್ದೆಗಳನ್ನು ಲೆಕ್ಕಾಚಾರವಾಗಿ ಕೋಟಾ ಪ್ರಕಾರ ನಿಯತವಾಗಿ ತುಂಬಿರುವುದಿಲ್ಲ. ಒಮ್ಮೊಮ್ಮೆ ಮುಂಬಡ್ತಿ ಹುದ್ದೆಗಳಲ್ಲಿ ಮೊದಲಿಗೆ ನಿಯಮ 32 ರ ಪ್ರಕಾರ ಸ್ವತಂತ್ರ ಪ್ರಭಾರದಲ್ಲಿರಿಸಿ ಆನಂತರ ಅವರುಗಳನ್ನು ಸಾರಾ ಸಗಟಾಗಿ ಸಕ್ರಮಾತಿಗೊಳಿಸಿದ್ದರಿಂದ ಸಕ್ರಮಗೊಂಡ ಅಷ್ಟೂ ಜನರಿಗೆ ಆಯಾ ಬ್ಲಾಕ್‌ನಲ್ಲಿ ಸ್ಥಳಾವಕಾಶ ಕಲ್ಪಿಸಲು ಸಾಧ್ಯವಿರುವುದಿಲ್ಲ. ಹೀಗಾಗಿ ಅಂತಹವರನ್ನು ಮುಂದಿನ ಬ್ಲಾಕಿಗೆ ಕೊಂಡೊಯ್ದು ಅಲ್ಲಿ ಹೊಂದಾಣಿಕೆ ಮಾಡಲಾಗಿದೆ. ಹಾಗೆ ಬ್ಲಾಕ್ ನಂ.30 ರಿಂದ 34 ರವರೆಗೆ ಮುಂಬಡ್ತಿ ವರ್ಗದವರಿಗೆ ಹೊಂದಾಣಿಕೆ ಮಾಡಿರುವ ವಿವರಗಳು ಈ ಕೆಳಗಿನಂತಿದೆ.

**ಬ್ಲಾಕ್ ನಂ.30 :**

ಈ ಬ್ಲಾಕಿನಲ್ಲಿ 1422 ರಿಂದ 1509 ರವರೆಗಿನ ಮುಂಬಡ್ತಿ ವರ್ಗದವರಿಗೆ ಸರ್ಕಾರಿ ಆದೇಶ ದಿನಾಂಕ: 27-01-2001 ರನ್ವಯ ಸಕ್ರಮಗೊಳಿಸಿದ್ದರಿಂದ ಅವರುಗಳಿಗೆ ಆ ದಿನಾಂಕದಿಂದ ಅನ್ವಯಿಸುವಂತೆ ಅರ್ಹತಾ ದಿನಾಂಕವನ್ನು ಕೊಡಲಾಗಿದೆ / ನಿಗದಿಪಡಿಸಿದೆ – **ಒಟ್ಟಾರೆ ಸಂಖ್ಯೆ 86 ಮಂದಿ.**

**ಕ್ರ.ಸಂ.1510 ರಿಂದ 1514** – ಇಲ್ಲಿ ಬರುವ 5 ಮಂದಿ ಎಸ್‌ಸಿ/ಎಸ್‌ಟಿ ವರ್ಗದ ವಿಶೇಷ ನೇರ ನೇಮಕಾತಿ ಮೂಲಕ ಬಂದಂತಹವರಾಗಿರುವುದರಿಂದ ಅವರುಗಳ ನೇಮಕಾತಿ ದಿನಾಂಕ:08-07-2002 ನ್ನು ಆಧರಿಸಿ ನೇರ ನೇಮಕಾತಿ ಕೋಟಾದಲ್ಲಿ ಸ್ಥಳಾವಕಾಶ / ಸ್ಥಾನ ನಿಗದಿಪಡಿಸಿದೆ.

**ಕ್ರ.ಸಂ. 1515 ರಿಂದ 1577**– ಇದರಲ್ಲಿ ಬರುವ ಮುಂಬಡ್ತಿದಾರರಿಗೆ ತಹಶೀಲ್ದಾರ್ ಗ್ರೇಡ್-2 ಹುದ್ದೆಯಲ್ಲಿ ದಿನಾಂಕ:19-08-2002 ರಿಂದ ಜಾರಿಗೆ ಬರುವಂತೆ ಬಡ್ತಿ ಹುದ್ದೆಯಲ್ಲಿ ಸಕ್ರಮಗೊಳಿಸಿದ್ದರಿಂದ ಅದನ್ನು ಆಧರಿಸಿ ಅವರುಗಳಿಗೆ ದಿನಾಂಕ; 19-08-2002 ರ ಅರ್ಹತಾ ದಿನಾಂಕವನ್ನು ನೀಡಲಾಗಿದೆ.

**ಬ್ಲಾಕ್ ನಂ.31 :**

**ಕ್ರ.ಸಂ. 1578 ರಿಂದ 1584** – ಇಲ್ಲಿ ಬರುವ 7 ಮಂದಿ ಮುಂಬಡ್ತಿದಾರರನ್ನು ತಹಶೀಲ್ದಾರ್ ಗ್ರೇಡ್-2 ಹುದ್ದೆಯಲ್ಲಿ ದಿನಾಂಕ:19-08-2002 ರಿಂದ ಜಾರಿಗೆ ಬರುವಂತೆ ಸಕ್ರಮಗೊಳಿಸಿದ್ದರೂ ಮುಂಬಡ್ತಿ ಕೋಟಾದಲ್ಲಿ ಅವರಿಗೆ ಸ್ಥಳಾವಕಾಶ ಕಲ್ಪಿಸಲು / ಜೇಷ್ಠತೆ ಸ್ಥಾನ ನಿಗದಿಪಡಿಸಲು ಹುದ್ದೆಗಳು ಲಭ್ಯವಿಲ್ಲದಿದ್ದರಿಂದ ಇವರುಗಳನ್ನು ಬ್ಲಾಕ್ ನಂ.31 ಕ್ಕೆ ಕೊಂಡೊಯ್ದು ನೇರ ನೇಮಕಾತಿ ವರ್ಗದವರ ಮೇಲೆ ಜೇಷ್ಠತೆ ನಿಗದಿಪಡಿಸಿದೆ.

**ಬ್ಲಾಕ್ ನಂ.32 :**

**ಕ್ರ.ಸಂ.1712 ರಿಂದ 1718** – ಇಲ್ಲಿ ಬರುವ 7 ಮಂದಿ ಮುಂಬಡ್ತಿದಾರರನ್ನು ತಹಶೀಲ್ದಾರ್ ಗ್ರೇಡ್-2 ಹುದ್ದೆಯಲ್ಲಿ ದಿನಾಂಕ:19-08-2002 ರ ಸರ್ಕಾರಿ ಆದೇಶದ ಪ್ರಕಾರ ಸಕ್ರಮಗೊಳಿಸಿದ್ದರೂ ಅವರುಗಳನ್ನು ಮುಂಬಡ್ತಿ ಪಾಲಿನ ಕೋಟಾದಲ್ಲಿ ಸ್ಥಾನ ನೀಡಲಾಗಿದೆ. ಹೀಗಿದ್ದಾಗ್ಯೂ ಅವರುಗಳಿಗೆ ದಿನಾಂಕ:01-05-2006ರ ಅರ್ಹತಾ ದಿನಾಂಕವನ್ನು ನೀಡಲಾಗಿದೆ. ಇದಕ್ಕೆ ಕಾರಣ ದಿನಾಂಕ:15-04-2006 ರಂದು ಯಾವುದೇ ಮುಂಬಡ್ತಿ ಹುದ್ದೆಗಳು ಇರಲಿಲ್ಲ.

**ಬ್ಲಾಕ್ ನಂ.33 :**

ಈ ಬ್ಲಾಕಿನಲ್ಲಿ ಒಟ್ಟಾರೆ ಬರುವ 94 ಮುಂಬಡ್ತಿದಾರರಲ್ಲಿ ಕ್ರ.ಸಂ.1757 ರಿಂದ 1765 ರವರೆಗೆ ಬರುವ ಅಧಿಕಾರಿಗಳನ್ನು ದಿನಾಂಕ:19-08-2002 ರಿಂದ ಜಾರಿಗೆ ಬರುವಂತೆ ಸಕ್ರಮಗೊಳಿಸಿದ್ದಾಗ್ಯೂ ಮುಂಬಡ್ತಿ ಪಾಲಿನ ಕೋಟಾದಲ್ಲಿ ಹುದ್ದೆಗಳು ಲಭ್ಯವಾಗದಿದ್ದರಿಂದ ಅವರುಗಳನ್ನು ಬ್ಲಾಕ್ ನಂ.33 ಕ್ಕೆ ಕೊಂಡೊಯ್ದು ಅವರುಗಳಿಗೆ 24-12-2007ರ ಅರ್ಹತಾ ದಿನಾಂಕವನ್ನು ನೀಡಲಾಗಿದೆ. ಏಕೆಂದರೆ ಸದರಿ ದಿನಾಂಕದಂದು ಮುಂಬಡ್ತಿ ಪಾಲಿನ ಹುದ್ದೆಗಳು ಕ್ರೋಢೀಕೃತಗೊಂಡಿದ್ದವು / ಒಗ್ಗೂಡಿದ್ದವು (Accumulated Vacancies). ಅದೇ ರೀತಿ ಕ್ರ.ಸಂ. 1766 ರಿಂದ 1786 ರವರೆಗೆ ಬರುವ ಮುಂಬಡ್ತಿದಾರರನ್ನು ದಿನಾಂಕ: 31-12-2002 ರಿಂದ ಸಕ್ರಮಗೊಳಿಸಿದ್ದರೂ ಮುಂಬಡ್ತಿ ಕೋಟಾದಲ್ಲಿ ಹುದ್ದೆಗಳು ಲಭ್ಯವಾಗದಿದ್ದರಿಂದ ಅವರುಗಳನ್ನು ಕೆಳಗಿನ ಸ್ಥಾನಗಳಿಗೆ ದೂಕಲಾಗಿದೆ (Pushed down).

ಕ್ರ.ಸಂ.1787ರ ನಂತರ ಬರುವವರು ದಿನಾಂಕ;28-01-2008 ರಂದು ಮುಂಬಡ್ತಿ ಕೋಟಾದಲ್ಲಿ ಬಡ್ತಿ ಹೊಂದಿದ್ದರೂ ಇವರುಗಳಿಗೆ ದಿನಾಂಕ:24-12-2007 ರ ಅರ್ಹತಾ ದಿನಾಂಕವನ್ನು ನೀಡಲಾಗಿದೆ. ಇದಕ್ಕೆ ಕಾರಣ ಸದರಿ ದಿನಾಂಕದಂದು ಹುದ್ದೆಗಳು ಒಗ್ಗೂಡಿ ಬಂದಿದ್ದವು (Accumulated). ಆದ್ದರಿಂದ ಅವರುಗಳಿಗೆ ದಿನಾಂಕ;24-12-2007 ರ ಅರ್ಹತಾ ದಿನಾಂಕವನ್ನು ನೀಡಲಾಗಿದೆ.

**ಬ್ಲಾಕ್ ನಂ.34 :**

ಈ ಬ್ಲಾಕ್‌ನಲ್ಲಿ ಕ್ರ.ಸಂ.1850 ರಿಂದ 1857 ರವರೆಗೆ ಬರುವ ಮುಂಬಡ್ತಿದಾರರಿಗೆ ಉದ್ಭವಿಸಿದ ಬಡ್ತಿ ರಿಕ್ತ ಸ್ಥಾನಗಳಿಗೆ ಅನುಗುಣವಾಗಿ ದಿನಾಂಕ:28-01-2008 ರ ಅರ್ಹತಾ ದಿನಾಂಕವನ್ನು ನೀಡಲಾಗಿದೆ.

**ಎಸ್. ಬಾಲಕೃಷ್ಣಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3).

**ANNEXURE - I**

**Statement showing the vacancies classified for DR Quota and PR Quota and vacancies actually utilised**

| Sl. No. | Block No. | Period of the Block and the Quota fixed as per C & R Rules (%) | Total No. of Vacancies occurred during the Block | Classification of vacancies as per quota rule | | Vacancies actually utilised for | | Unutilised vacancies as per the Quota (-) | | Cumulative Total Exces (+) Dificit (-) | | Sl.No. of Rankings for the Block in the list |
|---|---|---|---|---|---|---|---|---|---|---|---|---|
| | | | | DR | PR | DR | PR | DR | PR | DR | PR | |
| 1 | 2 | 3 | 4 | 5 | 6 | 7 | 8 | 9 | 1 | 2 | 3 | 4 |
| 1 | I | 01-11-1956 TO 01-02-1957 (assigned to ISS List Officers) | 23 | 0 | 0 | 0 | 23 | 0 | 0 | 0 | 0 | 1-23(23) |
| 2 | II | 02-12-1957 to 07-12-1957 | No | 0 | 0 | 0 | 0 | 0 | 0 | 0 | 0 | 0 |
| 3 | III | 08-12-1957 to 09-09-1958 (No classification assigned to Probationers of 1956) | 31 | 0 | 0 | 0 | 31 | 0 | 0 | 0 | 0 | 24-54(31) |
| 4 | IV | 10-09-1958 to 10-09-1959 (50:50) (21 vacancies assigned to 1958 DRs specially recruits) | 35 | 21+7 | 7 | 21+7 | 7 | 0 | 0 | 0 | 0 | 55-89(35) |
| 5 | V | 11-09-1959 to 20-04-1962 (33:66) (1/3:2/3) | 123 | 41 | 82 | 50 | 82 | 0 | 0 | (+)9 | 0 | 90-212(123) |
| 6 | VI | 21-04-1962 to 10-09-1965 (33:66) (1/3:2/3) | 77 | 26 | 51 | 26 | 51 | 0 | 0 | 25 | 0 | 213-289(77) |
| 7 | VII | 11-09-1965 to 26-12-1969 (50:50) | 115 | 57 | 58 | 25 | 58 | (-)32 | 0 | -32 | 0 | 290-324(83) |
| 8 | VIII | 07-12-1969 to 03-02-1970 (50:50) | 9 | 4 | 5 | 36 | 5 | 0 | 0 | 8 | 0 | 373-413(41) |
| 9 | IX | 04-02-1970 to 16-05-1972 (50:50) | 84 | 42 | 42 | 23 | 42 | (-)19 | 0 | -19 | 0 | 414-478(65) |
| 10 | X | 17-05-1972 to 20-08-1974 (50:50) | 21 | 10 | 11 | 13 | 11 | (-)16 | 0 | -16 | 0 | 479-502(24) |
| 11 | XI | 21-08-1974 to 13-07-1976 (50:50) | 43 | 22 | 21 | 38 | 21 | 0 | 0 | 12 | 0 | 503-561(59) |
| 12 | XII | 14-07-1976 to 26-07-1976 (50:50) | 0 | 0 | 0 | 52 | 0 | 0 | 0 | 64 | 0 | 0 |
| 13 | XIII | 27-07-1976 to 30-07-1976 (50:50) | 1 | 0 | 1 | 0 | 1 | 0 | 0 | 88 | 0 | 562(1) |
| 14 | XIV | 31-07-1976 to 31-03-1977 (50:50) | 57 | 29 | 28 | 29 | 28 | 0 | 0 | 104 | 0 | 563-619(57) |
| 15 | XV | 01-04-1977 to 16-08-1978 (50:50) | 20 | 10 | 10 | 10 | 10 | 0 | 0 | 143 | 0 | 620-639(20) |
| 16 | XVI | 17-08-1978 to 31-12-1979 (50:50) | 10 | 5 | 5 | 5 | 5 | 0 | 0 | 138 | 0 | 640-649(10) |
| 17 | XVII | 01-01-1980 to 22-03-1982 (50:50) | 164 | 82 | 82 | 82 | 82 | 0 | 0 | 110 | 0 | 650-813(164) |

